ಫೆಬ್ರವರಿ, ೧೯೮೪



# ಸಿದ್ಧಗಂಗಾ

॥ ಶ್ರೀ ಸಿದ್ದಲಿಂಗ ಪ್ರಸನ್ನ ॥



## ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ರಥೋತ್ಸವಾಹ್ವಾನ ಪತ್ರಿಕಾ

**ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು**

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ೧೯೦೫ಕ್ಕೆ ಸರಿಯಾದ
ಶ್ರೀ ರುಧಿರೋದ್ಗಾರಿನಾಮ ಸಂವತ್ಸರದ

| | | | |
|---|---|---|---|
| ಮಾಘ ಬಹುಳ ತೃತೀಯ | ಭಾನುವಾರ | 19-2-84 | ಶಾಸ್ತ್ರೋಕ್ತ ಕಾರ್ಯಗಳು |
| ,, ,, ಚತುರ್ಥಿ, | ಸೋಮವಾರ | 20-2-84 | ವೃಷಭವಾಹನ ಮತ್ತು ಗಜವಾಹನ |
| ,, ,, ಪಂಚಮಿ, | ಮಂಗಳವಾರ | 21-2-84 | ಹುಲಿವಾಹನ ಮತ್ತು ರಾವಣವಾಹನ |
| ,, ,, ಷಷ್ಠಿ, | ಬುಧವಾರ | 22-2-84 | ಮುತ್ತಿನ ಪಾಲಕಿ ಉತ್ಸವ |
| ,, ,, ಸಪ್ತಮಿ, | ಗುರುವಾರ | 23-2-84 | ರುದ್ರಾಕ್ಷಿಮಂಟಪೋತ್ಸವ ಮತ್ತು ನವರಂಗ ಪಾಲಕಿ ಉತ್ಸವ |
| ,, ,, ಅಷ್ಟಮಿ, | ಶುಕ್ರವಾರ | 24-2-84 | ಹುತ್ತದವಾಹನ ಮತ್ತು ನವಿಲುವಾಹನ |
| ,, ,, ನವಮಿ, | ಶನಿವಾರ | 25-2-84 | **ಬೆಳ್ಳಿಪಾಲಕಿ ಉತ್ಸವ** |
| ,, ,, ದಶಮಿ, | ಭಾನುವಾರ | 26-2-84 | ಬಿಲ್ವವೃಕ್ಷವಾಹನ |
| ,, ,, ಏಕಾದಶಿ, | ಸೋಮವಾರ | 27-2-84 | ಸಿಂಹವಾಹನ ಮತ್ತು ನಂದಿವಾಹನ |
| ,, ,, ದ್ವಾದಶಿ, | ಮಂಗಳವಾರ | 28-2-84 | ಶೇಷವಾಹನ ಮತ್ತು ಅಶ್ವವಾಹನ |
| ,, ,, ತ್ರಯೋದಶಿ, | ಬುಧವಾರ | 29-2-84 | **ಮಹಾಶಿವರಾತ್ರಿ ಪೂಜಾದಿಗಳು** ಮುತ್ತಿನ ಪಾಲಕಿ ಉತ್ಸವ |
| ,, ,, ಚತುರ್ದಶಿ, | ಗುರುವಾರ | 1-3-84 | **ರಥೋತ್ಸವ ಮತ್ತು ತೆಪ್ಪೋತ್ಸವ** |
| ,, ,, ● | ಶುಕ್ರವಾರ | 2-3-84 | ಪಂಚಬ್ರಹ್ಮೋತ್ಸವ |

ಮತ್ತು ಮಾಮೂಲಿನಂತೆ "**ಎತ್ತಿನ ಪರಿಷೆಯೂ**" **26-2-84**ನೇ ಭಾನುವಾರ "ದನಗಳ ಪ್ರದರ್ಶನವೂ" ಉತ್ತಮ ರಾಸುಗಳಿಗೆ ಬಹುಮಾನ ವಿನಿಯೋಗವೂ, ನಡೆಯುವಂತೆ ಏರ್ಪಡಿಸಿದೆ. "ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನವೂ" ಮತ್ತು ಪ್ರತಿದಿವಸವೂ ಸಾಯಂಕಾಲ "**ಸಾಂಸ್ಕೃತಿಕ ಚಟುವಟಿಕೆಗಳೂ**" ನಡೆಯುವಂತೆ ಏರ್ಪಾಟು ಮಾಡಲಾಗಿದೆ.

**ಸರ್ವರೂ ಸಕಾಲದಲ್ಲಿ ಬಂದು ಉತ್ಸವಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕೆಂದು ಅಪೇಕ್ಷಿಸುತ್ತೇವೆ.**

ಶ್ರೀ ಸಿದ್ಧಗಂಗಾ ಕ್ಷೇತ್ರ,
ತುಮಕೂರು ಜಿಲ್ಲೆ. ದಿನಾಂಕ 1-2-1984

ಶ್ರೀ ಶ್ರೀ ಸ್ವಾಮಿಗಳವರು

# ಸಿದ್ಧಗಂಗಾ

ಸಂಪುಟ-೨೦ ಸಂಚಿಕೆ-೨ ಫೆಬ್ರವರಿ ೧೯೮೪

## ತೋಂಟದ ಗುರುಸಿದ್ಧಲಿಂಗೇಶ

—ಹೇರಂಬ ಕವಿ.

ಮಂಗಳ ಯೋಗಾಂಗನಾಕ್ರೀಡ ಶ್ರೀ ಸಿದ್ಧ ।
ಲಿಂಗಗೆ ಭಕ್ತಸಂಗನಿಗೆ ॥
ಮಂಗಳ ಕಲಿ ಮಾಯಾಂಗನ ಗರ್ವಭಂಗ ನಿ– ।
ಜಾಂಗ ಭುಜಂಗ ಶರಣನಿಗೆ ॥

ಮಂಗಳ ಕಗ್ಗೆರೆಯೊಳು ಯೋಗಗಯ್ವಗೆ ।
ಮಂಗಳಯತಿ ಸಿದ್ಧೇಶ್ವರಗೆ ॥
ಮಂಗಳ ಮೊರೆಪೊಕ್ಕರನು ಕಾಯ್ವ ದೇವಗೆ ।
ಮಂಗಳ ಮಹಾಗುಣಾರ್ಣವಗೆ ॥

# ಈ ಸಂಚಿಕೆಯಲ್ಲಿ









# ಶ್ರೀವಾಣಿ

ಭರತ ಖಂಡದ ಜನಾಂಗ ಜಗತ್ತಿನಲ್ಲೇ ಮೊಟ್ಟ ಮೊದಲು ಜೀವನದ ಕಲೆ ಅರಿತುಕೊಂಡು ಜಗತ್ತಿಗೆ ಬೋಧಿಸಿತತ್ವಜ್ಞಾನ ನೀಡಿದರು. ಮಾನವಕುಲಕ್ಕೆ ಅನುಕೂಲವಾದ ಸಿದ್ಧಾಂತವನ್ನು ಜಗತ್ತಿಗೆ ನೀಡಿದರು. ವಿಶಾಲವಾದ ಭಾವನೆಯುಳ್ಳ ಜನಾಂಗ ನಮ್ಮ ದೇಶಕ್ಕೆ ಬಂದ ಎಲ್ಲರನ್ನೂ ಸ್ವಾಗತಿಸಿದರು. ಇಂಥ ಹಿಂದೂಧರ್ಮ ಅಸಂಖ್ಯಾತ ರತ್ನಗಳುಳ್ಳ ಮಹಾಸಾಗರ ಇದ್ದಂತೆ. ಪರಧರ್ಮ ಸಹಿಷ್ಣುತೆಯುಳ್ಳದ್ದು. ಇಂತಹ ಧರ್ಮಕ್ಕೆ ಈ ನಾಡಿನಲ್ಲಿ ಪ್ರಬಲವಾದ ಆಘಾತವಾಗಿದೆ. ಈಗ ಎಲ್ಲರೂ ಸಂಘಟಿತರಾಗಿ ಧರ್ಮವನ್ನು ಉಳಿಸಬೇಕಾಗಿದೆ. ಹಿಂದು ಧರ್ಮ ಉಳಿದು ಬೆಳೆದರೇನೆ ಜಗತ್ತಿನಲ್ಲಿ ಶಾಂತಿ ನೆಲಸುವುದು.

## "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

ಪಂ|| ಚನ್ನಪ್ಪ ಎರೇಸೀಮೆ

* * *

ಸಹ ಸಂಪಾದಕರು

ಎಸ್. ಚಂದ್ರಶೇಖರಯ್ಯ

ಬಸವರಾಜು

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

**ವಾರ್ಷಿಕ ಚಂದಾ 15-00 ರೂ**

**ಆಜೀವ ಸದಸ್ಯತ್ವ 201-00 ರೂ**

**1984 ನೇ ಜನವರಿಯಿಂದ**


### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.


"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.




# ಸಂಪಾದಕೀಯ

ಸೌಹಾರ್ದಯುತವಾಗಿ ಒಂದೆಡೆಸೇರಿ, ರಾಜ್ಯದ ಇತಿಮಿತಿಗಳನ್ನು ಗಮನಿಸಿ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಬಹುದಾದ ಕಡೆಗಳಲ್ಲೆಲ್ಲ ಮುಷ್ಕರ, ಉಪವಾಸ, ಚಳುವಳಿ, ಆಂದೋಲವ ನಡೆಸಿ ಗುಲ್ಲನ್ನೆ ಎಬ್ಬಿಸುತ್ತ ಗದ್ದಲ ಮಾಡುವುದೇನೊ ಶೋಭೆಯನ್ನುಂಟು ಮಾಡುವ ಮಾರ್ಗವಲ್ಲ. ಸಣ್ಣ ಸಣ್ಣ ಸಮಸ್ಯೆಗಳಿಗೆಲ್ಲ ಹೀಗೆ ನೂರಾರು ಮುಖದಲ್ಲಿ ಯಾವ ಸರಕಾರವೇ ಇರಲಿ ಅದರೊಡನೆ ಸೆಣಸುವ ಮಾರ್ಗಬಿಟ್ಟು ಕೊಟ್ಟು ಸಂಘಸಂಸ್ಥೆಗಳ ಪದಾಧಿಕಾರಿಗಳು ಸರಕಾರ ಮಾತುಕತೆಗೆ ಕರೆದಾಗ ಅದರೊಡನೆ ಸಹಕರಿಸಿ ಸೌಹಾರ್ದಯುತವಾದ ವಾತಾವರಣ ಕಲ್ಪಿಸಿಕೊಂಡು ಒಂದು ನಿರ್ಧಾರಕ್ಕೆ ಬರಬೇಕಾದುದು ಅತ್ಯಂತ ಶ್ರೇಷ್ಠಮಾರ್ಗ. ಇಂಥ ಸಮಯದಲ್ಲಿ ಉದ್ವೇಗವನ್ನುಂಟು ಮಾಡುವ ಮಾತು, ಪತ್ರಿಕಾ ಹೇಳಿಕೆ, ಅಪಶಬ್ದ ಪರಂಪರೆ ಬಳಸದೆ ಗೌರವಾನ್ವಿತವಾಗಿ ಮಾತಾಡಿ ತಮ್ಮ ಸೌಜನ್ಯವನ್ನು ಮೆರೆಸಬೇಕಾದುದೂ ಅತಿಮುಖ್ಯ. ದೊಡ್ಡಪ್ರಮಾಣದ ಚಳುವಳಿ ನಡೆಯುವ ಕಾಲದಲ್ಲಿ ಎಲ್ಲರೂ ಶಾಂತಿಯುತವಾಗಿ ಚಳುವಳಿ ನಡೆಸುತ್ತೇವೆ ಎನ್ನುವವರೇ, ಆದರೆ ಆ ಸಮಯವನ್ನು ದುರುಪಯೋಗ ಪಡಿಸಿಕೊಂಡು ಸಾರ್ವಜನಿಕರಿಗೆ ನಿರಪರಾಧಿಗಳಿಗೆ ತೊಂದರೆಯಾಗುವಂತೆ ವರ್ತಿಸುವ ದುಷ್ಟಶಕ್ತಿಗಳೂ ಕೂಡಿಕೊಳ್ಳುತ್ತವೆ. ಮೊನ್ನೆ ತಾನೆ ಡಾ|| ರಾಜಕುಮಾರ ಅಭಿಮಾನಿಗಳ ಸಂಘದ ಬೆಂಗಳೂರು ಬಂದ್ ಚಳುವಳಿಯ ಕಾಲಕ್ಕೆ ಆದ ಅನಾಹುತಗಳಿಗೆ ಹೊಣೆ ಯಾರು ? ಶಾಂತಿಯುತವಾದ ಚಳುವಳಿಯೇ ನಾಯಕರ ಮನಸ್ಸಿನಲ್ಲಿದ್ದರೂ ಅಲ್ಲಿ ಭುಗಿಲೆಂದು ಅಶಾಂತಿಯ ವಾತಾವರಣ ಮೂಡಿಸುವವರು ಸೇರಿಯೇ ಇರುತ್ತಾರೆ. ಆಗ ಸಾರ್ವಜನಿಕರ ಸೊತ್ತು ಸರಕಾರದ ಸೊತ್ತುಗಳ ರಕ್ಷಣೆಗೆ ಗಲಭೆಯನ್ನು ತಡೆಗಟ್ಟಲು ಪೋಲೀಸ್ ಇಲಾಖೆ ತನ್ನ ಪಾಲಿನ ಕೆಲಸ ಮಾಡಲೇ ಬೇಕಲ್ಲವೆ ? ಅದರ ಪರಿಣಾಮ ಕೆಲವು ಜನರ ಪ್ರಾಣಹಾನಿ. ತಾ. ೨೬-೧-೮೪ ರ ರಾಜ್ಯಮಟ್ಟದ ರೈತ ಚಳುವಳಿ ಮಾಡುವುದನ್ನೂ ಕೂಡ ವಿವೇಕದಿಂದ ಅದರ ಪದಾಧಿಕಾರಿಗಳು ತಪ್ಪಿಸಬಹುದಿತ್ತು. ಸರಕಾರ ಮಾತುಕತೆಗೆ ಕರೆದಾಗ ಅದರೊಡನೆ ಸೌಹಾರ್ದಯುತವಾಗಿ ಸೇರಿ ಚರ್ಚಿಸಿ ಸಾಧ್ಯವಾದುದನ್ನು ಸಾಧಿಸಬಹುದಿತ್ತೆಂದು ತೋರುತ್ತದೆ. ಮೇಲಾಗಿ ಈ ಸತ್ಯಾಗ್ರಹಕ್ಕೆ ಕರ್ನಾಟಕ ಪ್ರಾಂತ ರೈತ ಸಂಘ ತನ್ನ ಬೆಂಬಲ ಸೂಚಿಸಿಲ್ಲ. ರೈತ ಸಂಘಗಳಲ್ಲಿಯೇ ಪರಸ್ಪರ ವಿರೋಧವಿದೆ. ರೈತ ವರ್ಗಕ್ಕೆ ಸ್ವಾತಂತ್ರ್ಯಾನಂತರ ಬಹಳ

ಅನ್ಯಾಯವಾಗಿರುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಕೃಷಿಯನ್ನು ನಂಬಿ ದುಡಿಯುವ ಸಣ್ಣ ಹಿಡುವಳಿದಾರರ ಗತಿ ಹೇಳತೀರದು. ಆದರೆ ಇದಕ್ಕೆ ಪ್ರಚಲಿತ ಸರಕಾರವೇ ಹೊಣೆಯಲ್ಲ. ೩೬-೩೭ ವರ್ಷಗಳ ಭಾರತದ ಆಡಳಿತಗಳೆಲ್ಲ ಹೊಣೆ. ಪಂಚವಾರ್ಷಿಕ ಯೋಜನೆಗಳನ್ನು ರೂಪಿಸುವಲ್ಲಿನ ದೋಷ. ಕೃಷಿ ಪ್ರಧಾನವಾದ ಈ ದೇಶದಲ್ಲಿ ಮೊದಲಿನಿಂದ ಕೃಷಿಯ ಅಭಿವೃದ್ಧಿಗೆ ತೋರಿಸಿರುವ ಅಸಡ್ಡೆಯೇ ಪ್ರಧಾನ ಕಾರಣ. ಕೈಗಾರಿಕೀಕರಣದ ಬಿಳಿಯಾನೆಗಳನ್ನು ಕಟ್ಟುತ್ತ ಬಂದು ಕೃಷಿಯ ಹಸು ಕಟುಕರ ಮನೆಗೆ ತೆರಳುವಂತಾಗಿದೆ. ಯಾವ ಕೃಷಿಕರ ಹೋರಾಟವೇ ಆಗಲಿ ಅದು ಚಳುವಳಿ ನಡೆಸಬೇಕಾದುದು ಕೇಂದ್ರ ಸರ್ಕಾರದ ವಿರುದ್ಧವೇ ಅಲ್ಲದೆ ರಾಜ್ಯ ಸರ್ಕಾರಗಳ ವಿರುದ್ಧ ಅಲ್ಲ. ರಾಜ್ಯಗಳಿಗೆ ಸೀಮಿತ ಶಕ್ತಿಯಿದ್ದು ಅದು ರೈತರ ಬೇಡಿಕೆಗಳನ್ನೆಲ್ಲ ಪೂರೈಸಿ ತನ್ನ ಆರ್ಥಿಕ ನೀತಿಯನ್ನು ರೂಪಿಸಿಕೊಳ್ಳುವಷ್ಟು ಬಲಿಷ್ಠವಲ್ಲವೆಂಬುದನ್ನು ಎಲ್ಲರೂ ಯೋಚಿಸಬೇಕು. ಮಾತೆತ್ತಿದರೆ ಎಲ್ಲದಕ್ಕೂ ಮುಷ್ಕರ–ಉಪವಾಸ–ಚಳುವಳಿ–ದೊಂಬಿ ಇವನ್ನು ಮಾಡುತ್ತ ತಮ್ಮ ಭುಜಗಳನ್ನು ತಾವು ತಟ್ಟಿಕೊಳ್ಳುವ ಬದಲು ಉತ್ತಮ ವಾತಾವರಣ ಕಲ್ಪಿಸಿಕೊಂಡು ಸರಕಾರದೊಡನೆ ಮಾತುಕತೆ ನಡೆಸಿ ಸಾಧ್ಯವಾಗಬಹುದಾದ್ದನ್ನು ಪಡೆಯುವುದು ಸೂಕ್ತ. ಇಂದು ವಿಧಾನ ಸಭೆಯ ಬಹು ಭಾಗವೆಲ್ಲ ಉದ್ವೇಗಪೂರ್ಣ ಮಾತುಕತೆಗಳಲ್ಲೇ ಪರ್ಯವಸಾನಗೊಳ್ಳುತ್ತಲಿವೆ. ಒಮ್ಮೊಮ್ಮೆ ಅವರ ಮಾತುಕತೆಗಳು ಕೊಡುವ ದೃಷ್ಟಾಂತಗಳು ಸಂಸ್ಕಾರ ಜೀವಿಗಳಿಗೆ ಅಸಹ್ಯ ಹುಟ್ಟಿಸುವಂಥವುಗಳಾಗಿವೆ. ಮಾತೆತ್ತಿದರೆ ರಾಜಿನಾಮೆ ಕೊಡಿ. ಮನೆಗೆ ಹೋಗಿ ಎಂದರೆ ಏನರ್ಥ ? ನಾವು ಸರಕಾರ ನಡೆಸುತ್ತೇವೆಂದು ತಾನೆ. ಇವರು ಸರಕಾರ ನಡೆಸಿ ಈಗಿರುವ ಸಮಸ್ಯೆಗಳಿಗೆಲ್ಲ ಪರಿಹಾರ ಕೊಡುವ ಸಾಮರ್ಥ್ಯವಿದೆಯೇ ? ತಾವು ತಾನೆ ಪ್ರಾಮಾಣಿಕವಾಗಿ ಯೋಚಿಸಬೇಕು. ಪ್ರಾಮಾಣಿಕತೆ ಮಾಯವಾದಾಗಲೇ ಹುಟ್ಟಬಾರದ ಸಮಸ್ಯೆ ಹುಟ್ಟುತ್ತವೆ. ನಾವು ಎಲ್ಲ ವಿಧಾನ ಸಭಾ ಸದಸ್ಯರಿಗೆ ಸೂಚಿಸುವುದಿಷ್ಟೆ. ಭಾಷೆಯ ಮೇಲೆ ಹಿಡಿತವಿರಲಿ. ಸೌಹಾರ್ದದಿಂದ ಕೂಡಿ ಚರ್ಚಿಸಿ ರಾಜ್ಯದ ಸಮಸ್ಯೆಗೆ ಪರಿಹಾರ ಕಾಣಿ. ಸಾರ್ವಜನಿಕರ ಹಣವನ್ನು ವ್ಯರ್ಥವಾದ ಮಾತು. ಉದ್ವೇಗದ ವಾತಾವರಣ ಸೃಷ್ಟಿ. ದ್ವೇಷಾಸೂಯಗಳ ಬೆಳವಣಿಗೆಗೆ ಉಪಯೋಗಿಸಬೇಡಿ. ನಿಮ್ಮನ್ನೆಲ್ಲ ಅಲ್ಲಿಗೆ ಆರಿಸಿ ಕಳಿಸಿರುವುದು ಇದಕ್ಕಲ್ಲ. ಜನತಂತ್ರದ ನ್ಯಾಯಯುತ ಆಡಳಿತವನ್ನು ಕುದುರಿಸಲು ವಿಧಾನ ಸಭೆಯ ಕಲಾಪಗಳನ್ನೆಲ್ಲ ಸಾರ್ವಜನಿಕರು ತೀವ್ರಗಮನಿಸುತ್ತಾರೆ. ಜೊಳ್ಳುಗಟ್ಟಿಗಳನ್ನು ಗುರುತಿಸುತ್ತಾರೆ. ಉತ್ತಮ ವ್ಯಕ್ತಿತ್ವಗಳನ್ನು ಗುರುತಿಸುತ್ತಾರೆ. ಉತ್ತಮ ವ್ಯಕ್ತಿತ್ವವುಳ್ಳವರಾಗಿ ಕಾಣಿಸಿಕೊಳ್ಳಿ. ಸ್ಥಾನದ ಘನತೆ ಕಾಪಾಡಿ.



# ಕ್ಷೇತ್ರವಾರ್ತೆ

ಪಿ. ಎನ್. ಸಿ.

ಶ್ರೀ ಕ್ಷೇತ್ರದಲ್ಲಿ ದಿನಾಂಕ 8-1-84 ರಂದು ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಮೂವತ್ತನೆಯ ಸರ್ವಸದಸ್ಯರ ಮಹಾಧಿವೇಶನವು ಸಮಾವೇಶಗೊಂಡಿತ್ತು. ಸಭೆಯ ಅಧ್ಯಕ್ಷತೆಯನ್ನು ಪೂಜ್ಯ ಮಹಾಸನ್ನಿಧಿಯವರು ವಹಿಸಿದ್ದರು. ಸಭೆಯಲ್ಲಿ ಅನೇಕ ಮಹತ್ವದ ನಿರ್ಣಯಗಳನ್ನು ಕೈಗೊಳ್ಳಲಾಯಿತು. ಈ ಸಾರಿ ಸಭೆಯ ವಿಶೇಷವೇನೆಂದರೆ ಅಮೇರಿಕಾದಲ್ಲಿರುವ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳಾದ ಶ್ರೀಯುತರಾದ ಹೆಚ್. ಸಿದ್ಧಲಿಂಗಯ್ಯನವರು ಭಾಗವಹಿಸಿದ್ದರು. ಅವರು ತಮ್ಮ ಹಿಂದಿನ ಅನುಭವ ಮತ್ತು ಶ್ರೀ ಕ್ಷೇತ್ರದ ಆಶ್ರಯ ದೊರೆತದ್ದರಿಂದ ತಮ್ಮ ಔನ್ನತ್ಯಕ್ಕೆ ಕಾರಣವಾದದ್ದು ಮೊದಲಾದ ಅಂಶಗಳನ್ನು ಆತ್ಮೀಯತೆಯಿಂದ ಸ್ಮರಿಸಿಕೊಂಡರು. ಶ್ರೀ ಶ್ರೀಗಳವರ ವಜ್ರಮಹೋತ್ಸವವನ್ನು ಆಚರಿಸುವ ಸೌಭಾಗ್ಯವನ್ನು ಭಗವಂತನು ಅನುಗ್ರಹಿಸಲೆಂದು ಆಶಿಸಿದರು. ಪೂಜ್ಯರು ಸಭೆಯನ್ನು ಆಶೀರ್ವದಿಸುತ್ತಾ, ಇಂದಿನ ಸಭೆಗೆ ಅನೇಕ ಹಳೆಯ ವಿದ್ಯಾರ್ಥಿಗಳು ಆಗಮಿಸಿದ್ದೀರಿ ನಿಮ್ಮ ಸಹಾಯ ಸಹಕಾರ ಶ್ರೀ ಕ್ಷೇತ್ರದ ಅಭಿವೃದ್ಧಿಗೆ ಪೂರಕವಾಗಿದೆ. ಈ ರೀತಿ ವಿಶ್ವಾಸ ಮುಂದೆ ಮುಂದುವರಿದು ಬರಲೆಂದು ಆಶಿಸುತ್ತಾ, ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳು ಶ್ರೀ ಕ್ಷೇತ್ರಕ್ಕೆ ಸಲ್ಲಿಸುವ ಕಾಣಿಕೆಯೆಂದರೆ ಶ್ರೀ ಕ್ಷೇತ್ರವು ಇದುವರೆವಿಗೂ ಗಳಿಸಿ ಉಳಿಸಿಕೊಂಡು ಬಂದಿರುವ ಗೌರವಾದರಗಳನ್ನು ಕೃತಜ್ಞತೆಯಿಂದ, ಆತ್ಮೀಯತೆಯಿಂದ ಸ್ಮರಿಸುವುದು. ಈ ವಿಧವಾದ ಕೃತಜ್ಞತಾ ಸಮರ್ಪಣೆ ಉತ್ತಮ ಮಾನವೀಯ ಮೌಲ್ಯ. ಅದು ನಿಮ್ಮೆಲ್ಲರ ಜೀವನದುದ್ದಕ್ಕೂ ಬರಲೆಂದು ಆಶೀರ್ವದಿಸಿದರು. ಅಂದೇ ಸಂಘವು ಹೊರತಂದಿರುವ "ಶ್ರೀ ಸಿದ್ಧಗಂಗಾ" ಸಾಕ್ಷ್ಯ ಚಿತ್ರವನ್ನು ಹಳೆಯ ಮಿತ್ರರಿಗೆ ಪ್ರದರ್ಶಿಸುವ ವ್ಯವಸ್ಥೆಯನ್ನು ಮಾಡಲಾಗಿದ್ದಿತು.

ದಿನಾಂಕ 10-1-84 ಮತ್ತು 11-1-84 ರಂದು ಸಂಸ್ಕೃತ ದಿನಾಚರಣೆ ಮತ್ತು ವಿದ್ಯಾರ್ಥಿ ಸಂಘಗಳ ವಾರ್ಷಿಕೋತ್ಸವದ ಸಮಾರಂಭಗಳು ನಡೆದುವು. ಸಂಸ್ಕೃತ ಸಮಾರಂಭದ ಅಂಗವಾಗಿ 10-1-84 ರಂದು ಪ್ರಾತಃಕಾಲ ಸಂಸ್ಕೃತ ಶ್ಲೋಕಗಳ ಪಠಣ ಅನಂತರ ಸಂಸ್ಕೃತ ಧ್ವಜಾರೋಹಣ ಕಾರ್ಯಗಳು ಜರುಗಿದವು. 9-30 ಘಂಟೆಗೆ ಸಮಾರಂಭದ ಅಂಗವಾಗಿ ಏರ್ಪಡಿಸಿದ್ದ ಶಾಸ್ತ್ರ ವಿಚಾರ ಗೋಷ್ಠಿಯು ನಡೆಯಿತು. ಗೋಷ್ಠಿಯ ದಿವ್ಯ ನೇತೃತ್ವವನ್ನು ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ವಹಿಸಿದ್ದರು. ಗೋಷ್ಠಿಯ ಉದ್ಘಾಟನೆಯನ್ನು ತುಮಕೂರು ಜಿಲ್ಲಾ ಆರಕ್ಷಕಾಧಿಕಾರಿಗಳಾದ ಶ್ರೀ ಡಿ. ಎ. ಮುನಿಕೃಷ್ಣ, ಐ.ಪಿ.ಎಸ್. ಯವರು ಮಾಡಿದರು. ಗೋಷ್ಠಿಯಲ್ಲಿ ಉಭಯ ಭಾಷಾ ವಿದ್ವಾನ್, ಕವಿಶೇಖರ ಹ. ವೆಂ.

ನಾರಾಯಣ ಶಾಸ್ತ್ರಿಯವರು ಅಲಂಕಾರ ಶಾಸ್ತ್ರದ ನಿರೂಪಣೆಯನ್ನು ಮಾಡಿದರು. ವಿದ್ವಾನ್. ಎನ್. ಟಿ. ಶ್ರೀನಿವಾಸಯ್ಯಂಗಾರ್ ರವರು ವ್ಯಾಕರಣ ಶಾಸ್ತ್ರದ ಬಗ್ಗೆ ನಿರೂಪಣೆಯನ್ನು ಮಾಡಿದರು. ವಿದ್ವಾನ್. ಎಸ್. ವಿ ಭೀಮಭಟ್ಟ ಇವರು ನ್ಯಾಯಶಾಸ್ತ್ರದ ಬಗ್ಗೆ ನಿರೂಪಣೆಯನ್ನು ಮಾಡಿದರು. ವಿದ್ವಾನ್. ವೈ. ವಿಶ್ವನಾಥ ಶಾಸ್ತ್ರಿಗಳು ವೇದಾಂತ ಶಾಸ್ತ್ರದ ಬಗ್ಗೆ ನಿರೂಪಣೆಯನ್ನು ಮಾಡಿದರು. ಅಧ್ಯಕ್ಷತೆ ವಹಿಸಿದ್ದ ವೇದ ವಿದ್ವಾನ್. ಡಾ|| ಎ.ಎಸ್. ಅನಂತರಂಗಾಚಾರ್ ಬಿ.ಎ. ಆನರ್ಸ್ ಬಿ.ಟಿ. ಪಿಹೆಚ್. ಡಿ. ಇವರು ಉಪನಿಷತ್ತಿನ ಬಗ್ಗೆ ನಿರೂಪಣೆಯನ್ನು ಮಾಡಿದರು. ಗೋಷ್ಠಿಯನ್ನು ವಿದ್ವಾನ್. ವೈ. ವಿಶ್ವನಾಥಶಾಸ್ತ್ರಿಗಳವರು ನಿರ್ದೇಶನ ಮಾಡಿದರು.

ದಿನಾಂಕ 11-1-1984ನೇ ಬುಧವಾರ ಸಂಜೆ 6 ಘಂಟೆಗೆ ಸಾರ್ವಜನಿಕ ಸಮಾರಂಭವು ವ್ಯವಸ್ಥೆಗೊಳಿಸಲ್ಪಟ್ಟಿತು. ಸಭೆಯ ದಿವ್ಯ ನೇತೃತ್ವವನ್ನು ಪರಮಪೂಜ್ಯ ಸನ್ನಿಧಿಯವರು ವಹಿಸಿದ್ದರು. ಸಮಾರೋಪ ಭಾಷಣವನ್ನು ಕರ್ನಾಟಕ ರಾಜ್ಯ ಕೃಷಿ ಸಚಿವರಾದ ಶ್ರೀಮಾನ್. ಎಸ್. ರೇವಣ್ಣನವರು ವಹಿಸಿದ್ದರು. ಅತಿಥಿಗಳಾಗಿ ತುಮಕೂರು ವಿಧಾನ ಸಭಾಸದಸ್ಯರಾದ ಶ್ರೀಮಾನ್. ಲಕ್ಷ್ಮೀನರಸಿಂಹಯ್ಯನವರು ಭಾಗವಹಿಸಿದ್ದರು. ರಾತ್ರಿ ಶ್ರೀ ಕ್ಷೇತ್ರದ ಎಸ್.ಎಸ್.ಕೆ. ಕಲಾವೃಂದದವರಿಂದ 'ಕಂಬನಿ' ಎಂಬ ಸಾಮಾಜಿಕ ನಾಟಕವು ಅಭಿನಯಿಸಲ್ಪಟ್ಟಿತು.

15-1-84ರಂದು ಪ್ರಾತಃಕಾಲ 8 ಘಂಟೆಗೆ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಜಾತ್ರಾ ಅಂಗವಾಗಿ ಏರ್ಪಡಿಸಲಿರುವ ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ "ಗುದ್ದಲಿ" ಪೂಜೆಯನ್ನು ವಸ್ತುಪ್ರದರ್ಶನದ ಸಮಿತಿಯವರು ಏರ್ಪಡಿಸಿದ್ದರು. ಪೂಜ್ಯ ಶ್ರೀ ಶ್ರೀಗಳವರು ಗುದ್ದಲಿ ಪೂಜೆಯನ್ನು ನೆರವೇರಿಸಿಕೊಟ್ಟರು. ತಾ|| 18-1-84ರಂದು ವಸ್ತುಪ್ರದರ್ಶನವು ಆರಂಭವಾಗುತ್ತದೆ.

ದಿನಾಂಕ 26-1-84ನೆಯ ಗುರುವಾರ ಬೆಳಿಗ್ಗೆ 7 ಘಂಟೆಗೆ ಶ್ರೀಕ್ಷೇತ್ರದ ಆವರಣದಲ್ಲಿ "ಗಣರಾಜ್ಯ ದಿನಾಚರಣೆಯನ್ನು ಏರ್ಪಡಿಸಲಾಯಿತು." ರಾಷ್ಟ್ರಧ್ವಜಾರೋಹಣಾನಂತರ ಸಭೆಯು ಆರಂಭವಾಯಿತು. ಪೂಜ್ಯ ಮಹಾಸನ್ನಿಧಿಯವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಅತಿಥಿಗಳಾಗಿ ತುಮಕೂರಿನ ಜಿಲ್ಲಾಧಿಕಾರಿಗಳಾದ ಶ್ರೀಮಾನ್. ಕೆ. ಜೈರಾಜ್, ಐ.ಎ.ಎಸ್. ರವರು ಆಗಮಿಸಿದ್ದರು. ಸಭೆಯಲ್ಲಿ ಅನೇಕ ಮನರಂಜನಾ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು. ಮತ್ತು ವಿದ್ಯಾರ್ಥಿಗಳಿಂದ ಸಾಮೂಹಿಕ ವ್ಯಾಯಾಮ ಪ್ರದರ್ಶನವನ್ನೂ ಏರ್ಪಡಿಸಲಾಗಿತ್ತು.



# ಶ್ರೀ ಬಸವಣ್ಣನವರು—೨

(ಮುಂದುವರಿದ ಲೇಖನ)

—ಡಾ|| ಅ. ನ. ಕೃಷ್ಣರಾಯರು

ಶಿಷ್ಯ ತಮ್ಮಲ್ಲಿ ಕಲಿತದ್ದು ಮುಗಿದಿತ್ತು. ಇನ್ನವನು ವಿಶಾಲ ಪ್ರಪಂಚಕ್ಕೆ ಕಾಲಿಡಬೇಕು. ತನ್ನ ವಿದ್ಯೆಯ ಸದುಪಯೋಗ ಮಾಡಿಕೊಂಡು ಅದನ್ನು ಲೋಕ ಹಿತಾರ್ಥವಾಗಿ ಬಳಸಬೇಕೆಂದು ಜಾತವೇದ ಮುನಿಗಳು ಯೋಚಿಸಿದರು. ಸಮಯವನ್ನು ಸಾಧಿಸಿ ಬಲದೇವ ಮಂತ್ರಿ ವರಾರ್ಥಿಯಾಗಿ ಪರಿವಾರದೊಂದಿಗೆ ಗುರುಕುಲಕ್ಕೆ ಬಂದು ಬೀಡುಬಿಟ್ಟ. ಗುರುಗಳು ಎಲ್ಲವನ್ನೂ ಪರಾಮರ್ಶಿಸಿದರು. ಬಲದೇವನ ಪುಣ್ಯಕುಮಾರಿ ಗಂಗಾಂಬಿಕೆಯನ್ನು ನೋಡಿ ಬಸವನ ಗುಣಶೀಲಗಳಿಗೆ ಇವಳೇ ತಕ್ಕವಳೆಂದು ನಿರ್ಧರಿಸಿದರು. ಶಿಷ್ಯನನ್ನು ಆದರದಿಂದ ಹತ್ತಿರ ಕರೆದು ಗಂಗಾಂಬಿಕೆಯ ಪಾಣಿಗ್ರಹಣ ಮಾಡೆಂದು ಹೇಳಿದರು. ಬಸವಣ್ಣನವರ ಬಾಯ್ತೊಡರಿತು. ಮಾತು ಹೊರಡದಾಯಿತು. ಕಣ್ಣುಗಳಿಂದ ದುಃಖಾಶ್ರುಗಳು ಜಾರಿದವು. ಶ್ರೀ ಗುರುವಿನ ಅಣತಿಯನ್ನು ನಿರಾಕರಿಸಲಾಗದ ಸಂಕಟವೊಂದು ಕಡೆ, ಮತ್ತೆ ಕರ್ಮಕಾರಾಗಾರಕ್ಕೆ ಬೀಳಬೇಕಲ್ಲಾ ಎಂಬ ಉಮ್ಮಳವೊಂದು ಕಡೆ, ಗುರುವಿನ ಚರಣಗಳನ್ನು ಹಿಡಿದು ಈ ಸಂಕಟಕ್ಕೆ ನನ್ನನ್ನು ಸಿಕ್ಕಿಸಬೇಡಿರೆಂದು ಬೇಡಿದರು. ನಾನೇನು ಅಪರಾಧ ಮಾಡಿದೆನೆಂದು ಈ ಘೋರಶಿಕ್ಷೆ ಎಂದು ವಿನಯದಿಂದ ಕೇಳಿದರು. ಗುರು ಶಿಷ್ಯನ ಮೈದಡವುತ್ತಾ "ಬಸವಾ, ಈಕೆ ನಿನ್ನ ಕರ್ಮದ ಕುತ್ತಲ್ಲ. ನಿನ್ನ ಸಹಧರ್ಮಿಣಿ, ಒಮ್ಮುಖವಾಗಿರುವ ನಿನ್ನ ಜೀವನಕ್ಕೆ ಬೆಳಕನ್ನು ತರುವ ದೀಪಲಕ್ಷ್ಮಿ. ಈಕೆಯು ಕೈಹಿಡಿ. ನಿಮ್ಮಿಬ್ಬರ ಪರಿಶುದ್ಧ ಪ್ರೇಮದಿಂದ ಲೋಕದಲ್ಲಿ ಜ್ಞಾನ, ಪ್ರೇಮಗಳ ಬೆಳಕು ಬಿತ್ತರಿಸುತ್ತದೆ. ನಿನ್ನ ವಿದ್ಯಾರ್ಥಿದೆಶೆ ಮುಗಿಯಿತು, ಇನ್ನು ನೀನು ಗುರುವಾಗಬೇಕು. ಸಂಗ್ರಹಿಸಿಕೊಂಡಿರುವ ಜ್ಞಾನ ಭಂಡಾರವನ್ನು ದೀನ ದುಃಖಿಗಳಿಗೆ ಹಂಚಬೇಕು. ಸೇವೆಯ ನೋವನ್ನು ಆತ್ಮಾರ್ಪಣದ ಆ ಹಂತಿಯನ್ನು ಈ ತಾಯಿ ಪರಿಹರಿಸುವಳು." ಎಂದು ಸಮಾಧಾನ ಹೇಳಿದರು. ಬಸವಣ್ಣನವರು ಕತ್ತೆತ್ತಿ ತಮ್ಮ ಜೀವನದ ಜತೆಗಾತಿಯನ್ನು ನೋಡುತ್ತಾರೆ. ಗುರುವಿನ ಮಾತು ಸತ್ಯವೆನಿಸುತ್ತದೆ. ನುಡಿಯೊಡೆದು ಹೇಳಲಾಗದುದನ್ನು ಕರುಳು ಮಿಡಿಯುತ್ತದೆ.

**ಯೌವನ**

ಇನ್ನು ಗುರುಕುಲದಲ್ಲಿ ಹೆಚ್ಚು ದಿನವಿರಲು ಶಕ್ಯವಿಲ್ಲ. ತಮ್ಮ ಜೀವನ ಯಾತ್ರೆಯನ್ನು ಮುಂದುವರಿಸಲು ಬಸವಣ್ಣನವರು ಗುರು ಸಂಗಮನಾಥರ ಅಪ್ಪಣೆ ಪಡೆದು

ಹೊರಡಬೇಕಾದ ದಿನ ಸಮೀಪಿಸುತ್ತದೆ. ಗುರುಕುಲದ ಸಮಸ್ತ ಜೀವ ನಿರ್ಜೀವ ರಾಶಿಗಳು ಬಸವಣ್ಣನವರ ಜೀವನದೊಂದಿಗೆ ಬೆಳೆಯುಬಂದಿದ್ದವು. ತಾವು ಆಶ್ರಮಕ್ಕೆ ಬಂದಿದ್ದಾಗ ಎಳೆಗರುವಾಗಿದ್ದ ಕಪಿಲೆ ಈಗ ನಾಲ್ಕಾರು ಮೊಮ್ಮಕ್ಕಳನ್ನು ಹೆತ್ತಿತ್ತು. ಚಿಗುರುಬಳ್ಳಿಯಾಗಿದ್ದ ಮಲ್ಲಿಗೆ ಪುಷ್ಪಭರದಿಂದ ಜಗ್ಗುತ್ತಿತ್ತು. ತಮ್ಮ ಜತೆಯಲ್ಲಿ ವಿದ್ಯಾಭ್ಯಾಸಕ್ಕೆ ಬಂದಿದ್ದ ವಟುಗಳು ಈಗ ಸಮವಯಸ್ಕರಾಗಿ ತಾರುಣ್ಯದಿಂದ ಕಳೆಗೊಂಡಿದ್ದರು. ಪ್ರಕೃತಿ ವಿಕಸಿಸಿ ಪರಿಮಳಿಸಿತ್ತು. " ಈ ನನ್ನ ಬಂಧು ಬಾಂಧವರನ್ನು ಬಿಟ್ಟುಹೋಗಬೇಕಲ್ಲಾ, ನನ್ನ ಪ್ರಿಯ ಗುರುವನ್ನು ಬಿಟ್ಟು ಬಾಳಬೇಕಲ್ಲಾ, ನನ್ನ ಆರಾಧ್ಯಮೂರ್ತಿ ಸಂಗಮನಾಥನನ್ನು ತ್ಯಜಿಸಿ ತೆರಳಬೇಕಲ್ಲಾ " ಎಂದು ಬಸವಣ್ಣನವರ ಮನಸ್ಸು ಮೊರೆಯತೊಡಗಿತು.

ಬಸವಣ್ಣನವರು ಎಂದಿನಂತೆ ಸಂಗಮದಲ್ಲಿ ಸ್ನಾನಮಾಡಿ ತ್ರಿಪುಂಡ್ರ ಧರಿಸಿ, ಬಗೆಬಗೆಯ ಪುಷ್ಪಫಲಗಳಿಂದ ಸಂಗಮನಾಥನನ್ನು ಆರಾಧಿಸಿ ಅಂಜಲೀಬದ್ಧರಾಗಿ ನಿಂತಿದ್ದಾರೆ. ಅವರ ಕಣ್ಣುಗಳಿಂದ ನೀರು ಕೋಡಿವರಿಯುತ್ತಿದೆ. ಲಿಂಗದಿಂದ ಅಭಿಷೇಕ ಜಲ ಹರಿಯುತ್ತಿದೆ. ಸಂಗಮನಾಥನೂ ವಿಯೋಗವನ್ನು ಸಹಿಸಲಾರದೆ ಕಣ್ಣೀರ್ಗರೆಯುತ್ತಿದ್ದಾನೆ. ಮಾತನಾಡಬೇಕೆಂದು ಭಕ್ತ ಪ್ರಯತ್ನಿಸುತ್ತಾನೆ, ಕುತ್ತಿಗೆಯೊತ್ತಿದಂತಾಗುತ್ತದೆ. ಅಳುತ್ತ ಅಳುತ್ತ ಸಂಗಮನಾಥನನ್ನಪ್ಪಿ, ಹೊರಳುತ್ತ,

" ತಂದೆ ನಿನ್ನಂ ನಂಬಿ ನಚ್ಚಿ ಹೋದಪೆನಯ್ಯ
ಅಗಲಲಾರೆಂ ದೇವದೇವ ಕರುಣಿಪುದು "

ಎಂದು ನುಡಿಯುತ್ತಾರೆ. ಸಂಗಮನಾಥ ಎದ್ದು,

" ಬಂದಪ್ಪಿ ಕಣ್ಣ ನೀರಂ ತೊಡೆದು ಮಿಗೆ ಮರುಗಿ
ಬೇಡನ್ನ ಕಂದ ನಿನ್ನೊಡನೆ ಬಪ್ಪೆ, ಬಸವ
ನೋಡು ನಿನ್ನಾಣೆ ನಿನ್ನೊಡನೆ ಬಪ್ಪೆಂ ಬಸವ
ನಿನ್ನ ನಗಲಿರಲಾರ್ಪೆನೇ ಬಸವ ಬಸವಣ್ಣ
ಈನಿಂತಳುತಿಪ್ಪಡೆನಗಿರಿದು ಬಸವಣ್ಣ
ಕಂದ ಬೇಡಯ್ಯ ಬೇಡಯ್ಯ ನೇಹದ ನಿಧಿಯೆ.
ಹಿಂದುಗೊಂಡೇ ಬಪ್ಪೆನೆನ್ನ ಸುಕೃತದ ಸಿರಿಯೆ
ನೆನೆಯೆ ಮುಂದಿರ್ದಪೆಂ ಕರೆದೊಡೋ ಎಂದಪೆಂ
ಮನದೊಳಗೆ ಕರದೊಳಗೆ ತನುವಿನೊಳಗಿರ್ದಪೆಂ
ನಿಂದಲ್ಲಿ ನಿಂದಪೆಂ ನಡೆದಲ್ಲಿ ನಡೆದಪೆಂ
ಬಂದಲ್ಲಿ ಬಂದಪೆಂ ನುಡಿದಲ್ಲಿ ನುಡಿದಪೆಂ
ಬಿಟ್ಟುದಂ ಬಿಟ್ಟಪೆಂ ಪಿಡಿದುದಂ ಪಿಡಿದಪೆಂ
ನಟ್ಟುದಂ ನಟ್ಟಪೆಂ ಕೇಳ್ದುದಂ ಕೇಳ್ದಪೆಂ



ಆಡಿದುದನಾಡುವೆಂ ನೋಡಿತಂ ನೋಡುವೆಂ
ಮಾಡಿತಂ ಮಾಡುವೆಂ ಕೂಡಿತಂ ಕೂಡುವೆಂ
ನಡೆಯಯ್ಯ ನಡೆಮಗನೆ ನಡೆಕಂದ ಬಸವಣ್ಣ
ಪೊಡವಿಗಧಿಪತಿಯಾಗಿ ಬಾಳೆನ್ನ ಬಸವಣ್ಣ "

ಎಂದು ಸಮಾಧಾನ ಹೇಳಿದಂತಾಗುತ್ತದೆ. ಸಂಗಮನಾಥನ ಆಶ್ವಾಸನ ಬಸವಣ್ಣನವರಿಗೆ ಧೈರ್ಯಸ್ಥೈರ್ಯಗಳನ್ನುಂಟುಮಾಡುತ್ತದೆ. ಗುರುವಿನ ನಿರೂಪ ಪಡೆದು ಭಾವೀ ಮಾವ ಮಡದಿಯರೊಂದಿಗೆ ಕಲ್ಯಾಣಕ್ಕೆ ಪ್ರಯಾಣ ಮಾಡುತ್ತಾರೆ.

ಕಲ್ಯಾಣದಲ್ಲಿ ಬಸವಣ್ಣನವರ ವಿವಾಹ ಸಾಂಗವಾಗಿ ನೆರವೇರುತ್ತದೆ. ಆಳರಸನೇ ಮೊದಲಾಗಿ ಎಲ್ಲ ಮನ್ನೆಯರೂ ಮಾಂಡಲೀಕರೂ ಕಲ್ಯಾಣ ಮಂಟಪವನ್ನಲಂಕರಿಸಿ ವಧೂವರರನ್ನು ಆಶೀರ್ವದಿಸಿ ಯೋಗ್ಯ ಉಡುಗೊರೆಗಳಿಂದ ಸನ್ಮಾನಿಸುತ್ತಾರೆ. ವಿವಾಹಾನಂತರ ಮಗಳು ಅಳಿಯ ತನ್ನ ಮನೆಯಲ್ಲಿಯೇ ಸುಖವಾಗಿರಲಿ ಎಂದು ಬಲದೇವನ ಆಸೆ. ಬಸವಣ್ಣನವರು ಅದಕ್ಕೆ ಸಮ್ಮತಿಸಲಿಲ್ಲ. ಶ್ವಶುರಗೃಹವಾಸದಿಂದ ತಮ್ಮ ಆತ್ಮಗೌರವಕ್ಕೆ ಧಕ್ಕೆ ತಗಲುತ್ತದೆಂದು ಅವರು ದೃಢವಾಗಿ ನಂಬಿದ್ದರು. ಮಾವನ ಮನೆಯನ್ನು ಬಿಟ್ಟು ಬೇರೆ ವಾಸಮಾಡಲಾರಂಭಿಸಿ ಜೀವನೋಪಾಯಕ್ಕೆ ರಾಜಾಸ್ಥಾನದಲ್ಲಿ ಒಂದು ಕರಣೀಕ ವೃತ್ತಿಯನ್ನವಲಂಬಿಸಿ ನಿಂತರು. ಬಸವಣ್ಣನವರ ಸ್ವಾತಂತ್ರ್ಯವೃತ್ತಿ ಆತ್ಮಗೌರವ ನಿಷ್ಠೆ ಅವರನ್ನು ಪಟ್ಟಣಿಗರ ಕಣ್ಣಲ್ಲಿ ಬಹಳ ಮೇಲಕ್ಕೊಯ್ಯಿತು. (ಮುಂದುವರಿಯುತ್ತದೆ)

## ಪುರಾಣ ಮುನಿಗಳು—೩

# ನಾರದ

—ಷ. ರಾಮಕೃಷ್ಣ ಶಾಸ್ತ್ರಿ.

ಈ ಜಗತ್ತಿನಲ್ಲಿ ಒಮ್ಮೆ ಎಲ್ಲವೂ ನಾಶವಾಗಿ, ಯಾವ ಜೀವಿಯೂ ಸೃಷ್ಟಿಯಾಗುವುದಕ್ಕೆ ಹಿಂದಿನ ಕತೆ.

ಶ್ರೀಮನ್ನಾರಾಯಣನು ಕ್ಷೀರ ಸಮುದ್ರದಲ್ಲಿ ಆದಿಶೇಷನ ಮೇಲೆ ಮಲಗಿಕೊಂಡಿದ್ದ. ಆಗ ಲಕ್ಷ್ಮೀದೇವಿಯು ಅವನನ್ನು ಸ್ತುತಿಸುತ್ತಾ "ಈ ಜಗತ್ತು ಎಷ್ಟು ವಿಶಾಲವಾಗಿದೆ. ಆದರೆ ಇದು ಬರಿದಾಗಿಯೇ ಇರಬಾರದು. ಇದರಲ್ಲಿ ಜೀವರಾಶಿಗಳನ್ನು ಸೃಷ್ಟಿಸಬೇಕು." ಎಂದು ಪ್ರಾರ್ಥಿಸಿಕೊಂಡಳು. ನಾರಾಯಣನ ಇಚ್ಛಾಮಾತ್ರದಿಂದ ಅವನ ನಾಭಿಯಲ್ಲಿ ಒಂದು ಕಮಲವು ಹುಟ್ಟಿಕೊಂಡಿತು. ಆ ಕಮಲದಲ್ಲಿ ನಾಲ್ಕು ಮೊಗವುಳ್ಳ ಬ್ರಹ್ಮನು ಜನಿಸಿದ. ನಾರಾಯಣ ಅವನೊಂದಿಗೆ ಜೀವರಾಶಿಗಳನ್ನು ಸೃಷ್ಟಿಸುವ ಕೆಲಸವನ್ನು ಆರಂಭಿಸಬೇಕೆಂದು ಆಜ್ಞಾಪಿಸಿದ.

ಆಗ ಬ್ರಹ್ಮನು ತನ್ನ ತೊಡೆಯಿಂದ ನಾರದನನ್ನು ಸೃಷ್ಟಿಸಿದ. "ಮಗನೇ, ಜೀವರಾಶಿಗಳ ಮನಸ್ಸಿನಲ್ಲಿ ಹುದುಗಿರುವ ಆಶೆಯನ್ನು ತೊಲಗಿಸಿ ದೇವರಲ್ಲಿ ಭಕ್ತಿಯನ್ನು ಉಂಟು ಮಾಡುವ ಕೆಲಸ ನಿನ್ನದು. ಹದಿನಾಲ್ಕು ಲೋಕಗಳನ್ನು ಮೂರೂವರೆ ಘಳಿಗೆಯಲ್ಲಿ ಸುತ್ತಿಕೊಂಡು ಬರುವುದಕ್ಕೆ ನೀನು ಸಮರ್ಥನಾಗಿದ್ದಿ. ಹದಿನಾಲ್ಕು ಮನ್ವಂತರಗಳಲ್ಲೂ ನೀನು ಇರುತ್ತಿ" ಎಂದು ಹೇಳಿ ಅವನನ್ನು ಧರ್ಮೋಪದೇಶ ಮಾಡಲು ಕಳುಹಿಸಿದ.

ನಾರದನು ಬ್ರಹ್ಮನ ತೊಡೆಯಿಂದ ಹುಟ್ಟುವ ಮೊದಲು ಯಾವುದೋ ಒಂದು ಯುಗದಲ್ಲಿ ಒಬ್ಬ ಅನಾಥಳಾದ ಶೂದ್ರ ಹೆಂಗಸಿನ ಮಗನಾಗಿ ಹುಟ್ಟಿದ್ದ. ಪ್ರತಿ ವರ್ಷ ಚಾತುರ್ಮಾಸದಲ್ಲಿ ಆ ಹೆಂಗಸಿನ ಮನೆಯ ಪಕ್ಕದಲ್ಲಿ ಹಲವು ಮಂದಿ ದೈವಭಕ್ತರು ತಂಗುತ್ತಿದ್ದರು. ಆ ಹೆಂಗಸೂ ಅವರ ಸೇವೆಗೆ ಹೋಗುತ್ತಿದ್ದಳು. ಅವರಿಂದ ನಾರದನಿಗೆ ಒಂದು ದಿವ್ಯ ಮಂತ್ರವು ಉಪದೇಶವಾಗಿ ಸಿಕ್ಕಿತು. ಅದನ್ನೇ ನಾರದ ಧ್ಯಾನಿಸಿಕೊಂಡ.



ಒಂದು ದಿನ ನಾರದನ ತಾಯಿಯು ಹಾವು ಕಚ್ಚಿ ಸತ್ತಳು. ನಾರದ ಅನಾಥನಾದರೂ ದೈವಧ್ಯಾನವನ್ನು ಬಿಡಲಿಲ್ಲ. ಆಗ ಒಂದು ದಿನ ದೇವರು ಅವನೆದುರು ಕಾಣಿಸಿಕೊಂಡು, "ಈ ಜನ್ಮದಲ್ಲಿ ನಿನಗೆ ಒಂದು ಸಲ ಮಾತ್ರ ನನ್ನನ್ನು ನೋಡಲು ಅವಕಾಶವಿದೆ. ಈ ಜನ್ಮವಿಡೀ ನನ್ನ ಧ್ಯಾನದಲ್ಲೇ ಕಳೆದರೆ ಮುಂದಿನ ಜನ್ಮದಲ್ಲಿ ನನ್ನನ್ನು ಹೊಂದುತ್ತಿ" ಎಂದನು.

ಆ ಜನ್ಮವಿಡೀ ಹರಿಯನ್ನು ಧ್ಯಾನಿಸುತ್ತಾ ನಾರದನು ಸತ್ತುಹೋದ- ಬ್ರಹ್ಮನ ತೊಡೆಯಿಂದ ಜನಿಸಿದ ಮೇಲೆ ಬ್ರಹ್ಮನು ಅವನಿಗೆ ಮಹತಿ ಎಂಬ ಒಂದು ವೀಣೆಯನ್ನು ಅನುಗ್ರಹಿಸಿ, ತಾನೇ ಏಳು ಸ್ವರಗಳ ರೂಪದಲ್ಲಿ ಆ ವೀಣೆಯನ್ನು ನುಡಿಸಿ ನಾರದನು ಕರೆದ ಕೂಡಲೇ ಶ್ರೀ ಹರಿಯು ಓಡೋಡಿ ಬಂದು ಶಾಶ್ವತವಾಗಿ ನಾರದನ ಹೃದಯದಲ್ಲಿ ವಾಸಿಸತೊಡಗಿದನು. ಇವರಿಂದ ನಾರದನು ಮಹಾಭಕ್ತನಾದ. ತ್ರಿಮೂರ್ತಿಗಳ ಬಳಿಗೂ ದೇವಾದಿ ದೇವತೆಗಳ ಬಳಿಗೂ ಭೂಲೋಕದಲ್ಲಿಯೂ ಸಂಚರಿಸುತ್ತಿದ್ದುದರಿಂದ ತ್ರಿಲೋಕ ಸಂಚಾರಿಯನಿಸಿದ ನಾರದ.

ಬ್ರಹ್ಮನ ಶರೀರದಿಂದ ಜನಿಸಿದವರಲ್ಲಿ ದಕ್ಷನೂ ಒಬ್ಬ. ಈ ದಕ್ಷನಿಗೂ ಸೃಷ್ಟಿ ಮಾಡುವ ಕಲೆ ತಿಳಿದಿತ್ತು. ದಕ್ಷನು ತನ್ನ ಮಕ್ಕಳಾದ ಹರ್ಯಶ್ವ ಮತ್ತು ಶಬಲಾಶ್ವರೊಡನೆ ಜೀವರಾಶಿಗಳನ್ನು ಸೃಷ್ಟಿಸುವಂತೆ ಹೇಳಿದ. ಆಗ ನಾರದನು ಅವರ ಬಳಿಗೆ ಹೋಗಿ, "ಸೃಷ್ಟಿ ಮಾಡುವ ಅಧಿಕಾರ ಬ್ರಹ್ಮನಿಗೆ ಮಾತ್ರ ಸೇರಿದ್ದು, ಆದ್ದರಿಂದ ನಾವು ಈ ಕೆಲಸ ಮಾಡಬಾರದು." ಎಂದು ಅವರ ಮನವೊಲಿಸಿದ. ಆಗ ದಕ್ಷನಿಗೆ ನಾರದನ ಮೇಲೆ ಕೋಪ ಬಂತು. "ನೀನು ನಿಂತಲ್ಲಿ ನಿಲ್ಲದೆ ಎಲ್ಲರಿಗೂ ಜಗಳ ತಂದೊಡ್ಡುವಂಥ 'ಕಲಹ ಪ್ರಿಯ' ನಾಗು" ಎಂದು ಶಪಿಸಿದ.

ಶ್ರೀಹರಿಯು ಅದನ್ನು ಕೇಳಿ, "ನಾರದಾ ಚಿಂತಿಸಬೇಡ. ಈ ಅಕ್ಷರಗಳನ್ನು ಬಿಡಿಸಿದರೆ ನೀನು ತ್ರಿಮೂರ್ತಿಗಳಿಗೂ ಪ್ರಿಯನಾದವನು ಎಂದಾಗುತ್ತಿ. ಕ-ಎಂದರೆ ಕಮಲೋದ್ಭವ (ಬ್ರಹ್ಮ), ಲ-ಎಂದರೆ ಲಕ್ಷ್ಮೀಲೋಲನಾದ ನಾನು, ಹ-ಎಂದರೆ ಹರ, ಈ ಮೂವರಿಗೂ ನೀನು ಪ್ರಿಯನೆಂದೇ ಆಯಿತು" ಎಂದು ಸಮಾಧಾನಪಡಿಸಿದ.

ನಾರದನು ಸಂಗೀತಪ್ರಿಯ, ಒಮ್ಮೆ ನಾರದನಂತಹ ಸಂಗೀತಗಾರ ಯಾವ ಲೋಕದಲ್ಲೂ ಇಲ್ಲಿ ಎಂದು ಬ್ರಹ್ಮನು ಪ್ರಶಂಸೆ ಮಾಡಿದ. ಆದರಿಂದ ನಾರದನಿಗೆ ಜಂಭ ಬಂದಿತು. ಹಾಗೆಯೇ ಅವನು ತಿರುಗಾಡುತ್ತಾ ಬಂದಾಗ ಒಂದೆಡೆ ಹನುಮಂತನು ರಾಮನನ್ನು ಧ್ಯಾನಿಸುತ್ತಾ ಕುಳಿತಿದ್ದ. ನಾರದನು ತನ್ನ ವೀಣೆಯನ್ನು ಅಲ್ಲಿ ಇದ್ದ ಒಂದು ಕಲ್ಲಿನ ಮೇಲೆ ಇರಿಸಿ, ಹನುಮಂತನ ಧ್ಯಾನವನ್ನೇ ನೋಡುತ್ತಾ

ಕುಳಿತುಕೊಂಡ. ಹನುಮಂತನ ಭಕ್ತಿಯಿಂದ ಆ ಕಲ್ಲು ಕರಗತೊಡಗಿತು. ಅವನು ಧ್ಯಾನ ನಿಲ್ಲಿಸಿದ ಕೂಡಲೇ ಕರಗಿದ ಕಲ್ಲು ಗಟ್ಟಿಯಾಗಿ, ಅದರ ಮಧ್ಯೆ ಆತನ ವೀಣೆ ಸಿಲುಕಿಕೊಂಡಿತು.

ತನ್ನ ವೀಣೆಯನ್ನು ಪಡೆಯಲು ನಾರದನು ಬಹು ವಿಧದಿಂದ ಗಾಯನ ಮಾಡಿದ. ಆದರೆ ಆ ಕಲ್ಲು ಕರಗಲಿಲ್ಲ. ಆದರಿಂದ ನಾರದನ ಅಹಂಕಾರ ತಗ್ಗಿತು. ಅವನು ಹನುಮಂತನಿಗೆ ಶರಣಾದ. ಹನುಮಂತನು ಮತ್ತೆ ರಾಮಧ್ಯಾನ ಮಾಡಲಾರಂಭಿಸಿದ. ಕಲ್ಲು ಕರಗಿತು, ನಾರದನ ವೀಣೆ ಪುನಃ ದೊರಕಿತು.

ಇನ್ನೊಂದು ಸಲ ತನ್ನ ಸಂಗೀತದ ಬಗೆಗೆ ಗರ್ವ ತಾಳಿದಾಗ ಶ್ರೀಹರಿಯು ಅವನನ್ನು ಒಂದು ಕಾಡಿಗೆ ಕರೆದೊಯ್ದ. ಅಲ್ಲಿ ಕೈ, ಕಾಲು, ಕಿವಿ, ಮೂಗುಗಳು ಕತ್ತರಿಸಿ ಹೋದ ಹಲವು ಯುವತಿಯರು ನರಳುತ್ತಾ ಬಿದ್ದಿದ್ದರು. ನಾರದನು ಅವರೊಂದಿಗೆ, "ನೀವು ಯಾರು, ನಿಮಗೆ ದುರವಸ್ಥೆ ತಂದ ಈ ಪಾಪಿ ಯಾರು?" ಎಂದು ಕೇಳಿದ.

ಆಗ ಆ ಯುವತಿಯರು, "ನಾವು ರಾಗ ರಾಗಿಣಿಯರು. ನಾರದನು ರಾಗ, ತಾಳ ಅರಿಯದೆ ಅಶುದ್ಧ ಸಂಗೀತ ನುಡಿಸಿದುದರಿಂದ ನಮಗೆ ಈ ಗತಿ ಬಂದಿತು" ಎಂದರು. ನಾರದನ ಅಹಂಕಾರ ನೀಗಿತು. ಒಮ್ಮೆ ನಾರದನನ್ನು ತುಂಬುರನು ಸಂಗೀತದಲ್ಲಿ ಸೋಲಿಸಿದ. ಆಗ ಶ್ರೀಕೃಷ್ಣನು ಅವನಿಗೆ ಸರಿಯಾದ ಸಂಗೀತವನ್ನು ಹೇಳಿಕೊಟ್ಟು ತುಂಬುರನಿಗೆ ಸಮಾನನಾದ ಸಂಗೀತಗಾರನೆಂದು ನಾರದನನ್ನು ತೋರಿಸಿಕೊಟ್ಟ.

ಒಮ್ಮೆ ಪಾರ್ವತಿಯೊಂದಿಗೆ ಪಗಡೆಯಾಡಿ ಶಿವನು ಸೋಗುಹೋದ. ಆದರೆ ನಾರದನು ಶ್ರೀಹರಿಯೊಂದಿಗೆ ಕೃತ್ರಿಮ ದಾಳಗಳನ್ನು ಸೃಷ್ಟಿಸಿ ಪಾರ್ವತಿಯನ್ನು ಸೋಲಿಸಿ, ಶಿವನು ಗೆಲ್ಲುವಂತೆ ಮಾಡಲು ಮುಂದಾದ. ಅದನ್ನು ಅರಿತ ಪಾರ್ವತಿಯು, "ನಾರದನು ಜನ್ಮವಿಡೀ ಬ್ರಹ್ಮಚಾರಿಯಾಗಿಯೇ ಇರಲಿ" ಎಂದು ಶಾಪಕೊಟ್ಟಳು. ನಾರದನು ಒಮ್ಮೆ ಕೃಷ್ಣನ ಬಳಿಗೆ ಹೋದಾಗ ಹದಿನಾರು ಸಾವಿರದ ಎಂಟು ಪತ್ನಿಯರನ್ನು ಹೊಂದಿದ ಕೃಷ್ಣನನ್ನು ಕಂಡು, "ನನಗೆ ಮದುವೆಯಾಗಿ ಸಂಸಾರಿಯಾಗಬೇಕೆಂಬ ಆಶೆಯಾಗಿದೆ. ನಿನ್ನ ಸ್ತ್ರೀ ವರ್ಗದಿಂದ ಯಾವಳಾದರೂ ಒಬ್ಬಳನ್ನು ನನಗೆ ಕೊಟ್ಟುಬಿಡು" ಎಂದು ಬೇಡಿದ.

ಅದಕ್ಕೆ ಕೃಷ್ಣ, "ನಾನು ಇಲ್ಲಿರುವ ಇಷ್ಟು ಸ್ತ್ರೀಯರಲ್ಲಿ ಪ್ರತಿಯೊಬ್ಬಳ ಬಳಿಗೂ ಹೋಗು ಯಾರ ಬಳಿ ನಾನಿಲ್ಲವೋ ಅವಳನ್ನು ಹೆಂಡತಿಯಾಗಿ ಸ್ವೀಕಾರ ಮಾಡು"



ಎಂದ. ಎಲ್ಲರ ಮನೆಗೂ ಭೇಟಿ ಕೊಟ್ಟ ನಾರದ. ಆದರೆ ಒಂದಲ್ಲ ಒಂದು ರೂಪದಿಂದ ಅಲ್ಲಿ ಕೃಷ್ಣನನ್ನು ಕಂಡು, ನಾಚಿ ಅವನ ಕ್ಷಮೆ ಕೇಳಿ ಹಿಂದಿರುಗಿದನು.

ಅಂಬರೀಷ ರಾಜನ ಮಗಳಾದ ಶ್ರೀಮತಿಗೆ ಸ್ವಯಂವರ ನಿಶ್ಚಯವಾಯಿತು. ಅವಳು ತಮ್ಮ ಹೆಂಡತಿಯಾಗಬೇಕೆಂದು ಪರ್ವತನಿಗೂ ನಾರದನಿಗೂ ಪೈಪೋಟಿ ಉಂಟಾಯಿತು. ಆಗ ನಾರದನು ಶ್ರೀಹರಿಯೊಂದಿಗೆ ಸ್ವಯಂವರ ಮಂಟಪದಲ್ಲಿ ಪರ್ವತನ ಮುಖ ಕರಡಿಯ ಮುಖದಂತೆ ಕಾಣಬೇಕೆಂದು ವರ ಬೇಡಿದ. ಶ್ರೀಹರಿ "ಹಾಗೆಯೇ ಆಗಲಿ" ಎಂದ. ಅದೇ ರೀತಿ ನಾರದನ ಮುಖ ಕೋತಿಯ ಮುಖದಂತೆ ಕಾಣುವಂತಾಗಲೆಂದು ಪರ್ವತನು ಶ್ರೀಹರಿಯಿಂದ ವರ ಪಡೆದ. ವರದ ಪ್ರಭಾವದಿಂದ ಸ್ವಯಂವರ ಮಂಟಪದಲ್ಲಿ ಅವರ ಮುಖ ಕರಡಿ, ಕೋತಿಗಳಂತೆ ಕಾಣಿಸಿದಾಗ ಶ್ರೀಮತಿಯು ಶ್ರೀಹರಿಯ ಕೊರಳಲ್ಲಿ ಮಾಲೆ ಹಾಕಿದಳು. ನಾರದನು ಕೋಪದಿಂದ, ಶ್ರೀಹರಿಗೆ ರಾಮಾವತಾರದಲ್ಲಿ ಹೆಂಡತಿಯನ್ನು ಅಗಲುವ ದುರವಸ್ಥೆ ಬರಲಿ ಎಂದು ಶಪಿಸಿದ.

ನಾರದನು ಕೃಷ್ಣನೊಂದಿಗೆ "ಮಾಯೆ ಎಂದರೇನು?" ಎಂದು ಒಂದು ಸಲ ಕೇಳಿದ. ಆ ಮಾತಿಗೆ ಕೃಷ್ಣ ಮುಗುಳ್ನಕ್ಕನಲ್ಲದೆ ಉತ್ತರಿಸಲಿಲ್ಲ. ಒಂದು ದಿನ ನಾರದ ಸಂಚಾರ ಮಾಡುತ್ತಿದ್ದಾಗ ಮಳೆ ಬರತೊಡಗಿತು. ಅವನು ಸನಿಹದಲ್ಲಿದ್ದ ಒಂದು ಗುಡಿಸಲಿಗೆ ಹೋದ. ಅಲ್ಲಿ ಒಬ್ಬ ಯುವತಿ ಇದ್ದಳು, ನಾರದ ಅವಳನ್ನು ಮೋಹಿಸಿ, ಮದುವೆಯಾಗಿ ಹಲವರು ಮಕ್ಕಳನ್ನು ಪಡೆದ. ಒಂದು ದಿನ ದೊಡ್ಡ ಪ್ರವಾಹ ಬಂದು ನಾರದನ ಹೆಂಡತಿ ಮಕ್ಕಳು ಕೊಚ್ಚಿಕೊಂಡು ಹೋದರು. ನಾರದ ಗೋಳೋ ಎಂದು ಅಳುತ್ತಿದ್ದಾಗ ಕೃಷ್ಣ ಅವನ ಬಳಿಗೆ ಬಂದು, "ನಾರದ ಈಗ ಅರ್ಥವಾಯಿತೆ–ಮಾಯೆ ಎಂದರೆ ಏನು?" ಎಂದು ಕೇಳಿದ. "ಸ್ವಾಮಿ ಸಾಕು. ನನ್ನನ್ನು ನಿನ್ನ ಮಾಯೆಯಿಂದ ಉದ್ಧರಿಸು" ಎಂದು ಪ್ರಾರ್ಥಿಸಿದ ನಾರದ.

ನನ್ನನ್ನು ಮೀರಿಸಿದ ಬೇರೆ ಹರಿಭಕ್ತರಿಲ್ಲ ಎಂದು ಒಂದು ಸಲ ನಾರದ ಜಂಭಪಟ್ಟ. ಅವನು ಹರಿಯೊಂದಿಗೆ "ನಿನ್ನ ಭಕ್ತರಲ್ಲಿ ಯಾರು ಶ್ರೇಷ್ಠ?" ಎಂದು ಕೇಳಿದ.

ಆಗ ಹರಿಯು ನಾರದನ ಬದಲು ಒಬ್ಬ ಬಡ ರೈತನನ್ನು ತೋರಿಸಿದ. ನಾರದ ಆ ರೈತನ ಭಕ್ತಿ ಹೇಗೆ ಎಂಬುದನ್ನು ಪರೀಕ್ಷಿಸಿದಾಗ ಆ ರೈತ ಬೆಳಿಗ್ಗೆ ಏಳುವಾಗ 'ನಾರಾಯಣ' ಎನ್ನುತ್ತ ಏಳುತ್ತಿದ್ದ. ದಿನವಿಡೀ ದುಡಿಯುವಾಗ ಒಂದು ಸಲವೂ ದೇವರ ಧ್ಯಾನ ಮಾಡುತ್ತಿರಲಿಲ್ಲ. ರಾತ್ರಿ ಮಲಗುವ ಮೊದಲು ಒಂದು ಸಲ 'ನಾರಾಯಣ' ಎನ್ನುತ್ತಿದ್ದ. ಹೀಗಿರುವಾಗ ದಿನವಿಡೀ ಹರಿಸ್ಮರಣೆ ಮಾಡುವ ತನಗಿಂತ ಅವನು ಹೇಗೆ ಮೇಲಾಗುತ್ತಾನೆ? ಎಂದು ಕೇಳಿದ.

ಆಗ ಹರಿಯು ಎಣ್ಣೆ ತುಂಬಿಧ ಬಟ್ಟಲನ್ನು ನಾರದನ ಕೈಗೆ ಕೊಟ್ಟು "ಇದರಿಂದ ಒಂದು ಹನಿ ಎಣ್ಣೆ ಕೂಡ ತುಳುಕದಂತೆ ಹಿಡಿದುಕೊಂಡು ಮೂರು ಲೋಕಗಳನ್ನು ಸುತ್ತಿ ಬಾ. ಒಂದು ಹನಿ ಎಣ್ಣೆಯೂ ಬೀಳಬಾರದು ; ನೆನಪಿರಲಿ" ಎಂದ. ನಾರದ ಆ ಕಾರ್ಯವನ್ನು ಪೂರೈಸಿ ಹೆಮ್ಮೆಯಿಂದ ಬಂದ. ಆಗ ಹರಿಯು, "ಅದು ಸರಿ, ನೀನು ಈ ಕೆಲಸ ಮಾಡಿ ಬರುವಾಗ ನನ್ನನ್ನು ಎಷ್ಟು ಸಲ ಸ್ತುತಿಸಿದೆ?" ಎಂದು ಕೇಳಿದ. ನಾರದನಿಗೆ ನಾಚಿಕೆಯಾಯಿತು. ಆತ ಎಣ್ಣೆಯ ಮೇಲೆಯೇ ಲಕ್ಷ್ಯವನ್ನಿರಿಸಿದ್ದ ಕಾರಣ ಹರಿಸ್ಮರಣೆಯನ್ನು ಮರೆತಿದ್ದ.

ಹರಿಯು ನಾರದನೊಂದಿಗೆ ಹೇಳಿದ, "ಈ ಬಡರೈತ ದಿನವಿಡೀ ದುಡಿಯುತ್ತಾನೆ. ಆದರೆ ಎರಡು ಸಲ ನನ್ನನ್ನು ಸ್ಮರಿಸಲು ಮರೆಯುವುದಿಲ್ಲ."

ಇನ್ನೊಮ್ಮೆ ನಾರದನು ಹರಿಯೊಂದಿಗೆ "ಸತ್ಸಂಗದ ಫಲ ಏನು?" ಎಂದು ಕೇಳಿದ.

ಆಗ ಹರಿಯು ಒಂದು ಸಗಣಿ ಹುಳುವನ್ನು ತೋರಿಸಿ ಅವರೊಂದಿಗೆ ಈ ಪ್ರಶ್ನೆ ಹಾಕುವಂತೆ ಹೇಳಿದ. ನಾರದನು ಸಗಣಿ ಹುಳದ ಬಳಿಗೆ ಹೋದಾಗ ಅದು ಪ್ರಾಣತ್ಯಾಗ ಮಾಡುತ್ತಾ ಒಂದು ಕರುವಿನ ಬಳಿಗೆ ಹೋಗಿ ಈ ಪ್ರಶ್ನೆ ಕೇಳಲು ತಿಳಿಸಿತು. ನಾರದ ಕರುವಿನ ಬಳಿಗೆ ಹೋದ. ಕರವೂ ಪ್ರಾಣತ್ಯಾಗ ಮಾಡುತ್ತಾ, "ಈ ದೇಶದ ರಾಜನಿಗೊಬ್ಬ ಮಗ ಹುಟ್ಟುತ್ತಾನೆ. ಅವನು ಇದಕ್ಕೆ ಉತ್ತರ ಕೊಡುತ್ತಾನೆ" ಎಂದಿತು. ನಾರದನು ಆ ದೇಶದ ರಾಜನಿಗೆ ಜನಿಸಿದ ಮಗನ ಬಳಿಗೆ ತೆರಳಿದ. ಅವನನ್ನು ನೋಡಿದ ಮಗುವು, "ನಿಮ್ಮಂತಹ ಸಜ್ಜನರ ಸಂಗದಿಂದ ಒಂದು ಸಗಣಿ ಹುಳುವು ಕರುವಾಯಿತು. ಆ ಕರುವು ರಾಜನ ಮಗನಾಗಿ ಜನಿಸಿದ. ಅಂದರೆ ನಾನು ಸತ್ಸಂಗದ ಫಲದಿಂದ ಉದ್ಧಾರವಾದೆ. ಬೇರೆ ಉದಾಹರಣೆ ಯಾಕೆ? ಎಂದಿತು.

ಒಮ್ಮೆ ನಾರದನು ಹರಿಯೊಂದಿಗೆ ಮಾಯೆಯ ಸ್ವರೂಪ ಹೇಗೆಂಬುದನ್ನು ತಿಳಿಸಬೇಕೆಂದು ಪ್ರಾರ್ಥಿಸಿದಾಗ ಹರಿ ಒಪ್ಪಿಕೊಂಡ. ಒಂದು ದಿನ ನಾರದನು ಶ್ವೇತದ್ವೀಕ್ಕೆ ಹೋಗಿದ್ದಾಗ ಕನ್ಯಾಕುಬ್ಜ ಎಂಬ ಕೊಳದಲ್ಲಿ ಸ್ನಾನ ಮಾಡಿದ. ಅದರಿಂದಾಗಿ ಸುಂದರ ಯುವತಿಯಾಗಿ ನಾರದ ಮಾರ್ಪಟ್ಟ. ಬಳಿಕ ಅಲ್ಲಿಗೆ ಬಂದ ತಾಳಧ್ವಜನೆಂಬ ರಾಜ ಅವಳನ್ನು ಮದುವೆಯಾದ. ಹೆಣ್ಣಾದ ನಾರದನಿಗೆ ಇಪ್ಪತ್ತೊಂದು ಜನ ಮಕ್ಕಳು ಹುಟ್ಟಿದರು. ಒಂದು ದಿನ ಆ ರಾಜ್ಯದ ಮೇಲೆ ದಂಡೆತ್ತಿಬಂದ ಶತ್ರುಗಳೊಂದಿಗೆ ಹೋರಾಡಿ ತನ್ನ ಎಲ್ಲಾ ಮಕ್ಕಳೊಂದಿಗೆ ತಾಳಧ್ವಜ ಸತ್ತುಬಿದ್ದ. ಆಗ ಯುದ್ಧರಂಗದಲ್ಲಿ ಶೋಕಿಸುತ್ತಾ ಕುಳಿತ ಸ್ತ್ರೀರೂಪದ ನಾರದನ ಬಳಿಗೆ ಹರಿಯು ಬ್ರಾಹ್ಮಣ ರೂಪದಲ್ಲಿ ಬಂದು "ಯಾಕೆ ಅಳುತ್ತಿರುವೆ? ಸತ್ತ



ವರು ಮತ್ತೆ ಬರುವುದಿಲ್ಲ 'ಪುಂ" ತೀರ್ಥದಲ್ಲಿ ಸ್ನಾನ ಮಾಡಿ ಎಲ್ಲರಿಗೂ ನೆಲೋದಕ ಕೊಡು" ಎಂದ. ಆ ತೀರ್ಥಕ್ಕೆ ಇಳಿದ ಕೂಡಲೇ ಸ್ತ್ರೀರೂಪ ತೊಲಗಿ ನಾರದನಿಗೆ ಹಿಂದಿನ ರೂಪ ಬಂದಿತು.

ಒಂದು ಜನ್ಮದಲ್ಲಿ ನಾರದ ಒಂದು ಹುಳುವಾಗಿದ್ದ. ಬೀದಿಯಲ್ಲಿ ಆ ಹುಳ ಹೋಗುತ್ತಿದ್ದಾಗ ಒಬ್ಬ ರಾಜನ ರಥ ಬಂದಿತು. ರಥದ ಚಕ್ರಕ್ಕೆ ಸಿಲುಕಬಾರದೆಂದು ಹುಳುವು ಆತುರದಿಂದ ಬದಿಗೆ ಸರಿಯಿತು. ಅದನ್ನು ನೋಡಿ ರಾಜನು ನಕ್ಕ. ಆಗ ಹುಳ' "ಪ್ರತಿ ಜನ್ಮದಲ್ಲಿ ಆತ್ಮಕ್ಕೆ ದೇಹ ತುಂಬ ಪ್ರಿಯವಾದದ್ದು. ನಿನ್ನ ದೇಹ ನಿನಗೆ ಪ್ರಿಯವಾದಂತೆ ನನ್ನ ಈ ಸಣ್ಣ ದೇಹವೂ ನನಗೆ ಪ್ರೀತಿ" ಎಂದಿತು.

ನಾರದನಿಗೆ ತಾನೂ ದಾನಿಯಾಗಬೇಕೆಂದು ಅನಿಸಿತು. ಆದರೆ ಅವನ ಬಳಿ ಹಣ ಇಲ್ಲ. ಹಣ ಗಳಿಸಲು ಬ್ರಾಹ್ಮಣ ವೇಷದಲ್ಲಿ ಧರ್ಮವರ್ಮ ಎಂಬ ರಾಜನ ಬಳಿಗೆ ಹೋದ. ರಾಜನು ಕೇಳಿದ ಸಮಸ್ಯೆಗಳಿಗೆ ಉತ್ತರ ಹೇಳಿ ಬಹುಮಾನವಾಗಿ ಬಂದ ಭೂಮಿಯನ್ನೂ ಹಣವನ್ನೂ ಬ್ರಾಹ್ಮಣರಿಗೆ ದಾನ ಮಾಡಿದ. ಭಕ್ತಿಮಾರ್ಗದಲ್ಲಿ ಸಂತನಾಗಿ ಸಂನ್ಯಾಸಿಯಾಗಿ ನಡೆದು ನಾರದ ಮಹರ್ಷಿಯೆನಿಸಿದ. ಭಗವದ್ಗೀತೆಯಲ್ಲಿ ಅವನನ್ನು ಬ್ರಹ್ಮರ್ಷಿ ಎಂದೂ ಹೇಳಲಾಗಿದೆ.

ಜಗಳಗಂಟನೆಂದು ಲೋಕದ ಕಣ್ಣಿಗೆ ತೋರಿದರೂ ಲೋಕಕ್ಕೆ ಮಂಗಳವನ್ನುಂಟು ಮಾಡುವುದೇ ನಾರದನ ಜನ್ಮದ ಉದ್ದೇಶ. ಲೋಕಪ್ರೇಮ, ಸತ್ಸಂಗ, ಪರಿಶುದ್ಧ ಜೀವನದಿಂದ ಎಲ್ಲರಲ್ಲಿಯೂ ಭಕ್ತಿಯನ್ನು ಪ್ರಚುರಗೊಳಿಸುವುದೇ ಅವನ ಬದುಕಿನ ಗುರಿ.

---

## "ಹುಂಜವು ಮತ್ತು ರತ್ನವು"

—ಎಚ್. ಎಲ್. ರಾಮಸ್ವಾಮಿ. ಎಂ.ಎ.,

ಒಂದು ಹುಂಜವು ಒಂದು ತಿಪ್ಪೆಯ ಮೇಲೆ ನಿಂತು ಕೆದುರುತ್ತಿತ್ತು. ಅಕಸ್ಮಾತ್ತಾಗಿ ಅದಕ್ಕೆ ಹೆಚ್ಚು ಬೆಲೆ ಬಾಳುವ ಒಂದು ರತ್ನವು ಸಿಕ್ಕಿತು. ಆಗ ಅದು ತನ್ನಷ್ಟಕ್ಕೆ ಹೀಗೆಂದುಕೊಂಡಿತು. " ಇದೇ ರತ್ನ ಒಬ್ಬ ಜವಾಹಿರಿ ವ್ಯಾಪಾರಿಗೆ ಸಿಕ್ಕಿದಿದ್ದರೆ ಅವನು ಮಹದೈಶ್ವರ್ಯವಂತನಾಗಿ ಆನಂದಿಸುತ್ತಿದ್ದನು. ಆದರೆ ನನ್ನಂಥಹ ಹುಂಜನಿಗೆ ಒಂದು ಕಾಳು ಧಾನ್ಯವು ಪ್ರಪಂಚದ ಸರ್ವೋಚ್ಚ ಈ ವಜ್ರಕ್ಕಿಂತ ಮಿಗಿಲಾದುದು. ಇದರಿಂದ ನಮಗರಿವಾಗುತ್ತದೆ-" ಪ್ರತಿ ವಸ್ತುವಿನ ಬೆಲೆಯೂ ಅದರ ಉಪಯೋಗದಿಂದ ನಿರ್ಧರಿಸಲಾಗುತ್ತದೆ.

ಜಗದರ್ಶನ [illegible]

(ಮುಂದುವರಿದ ಲೇಖನ)

# ಚಾರ್ವಾಕ ದರ್ಶನ

—ಡಾ॥ ಗೋವಿಂದ ಅ. ಜಾಲಿಹಾಳ

## ಚಾರ್ವಾಕ ಶಬ್ದದ ಅರ್ಥ ಮತ್ತು ವ್ಯಾಪ್ತಿ:

ಈ ದರ್ಶನದ ಹೆಸರಾದ 'ಚಾರ್ವಾಕ' ಎಂಬ ಶಬ್ದದ ಅರ್ಥವು ಖಚಿತವಾಗಿ 'ಇದೇ' ಅಥವಾ 'ಇಷ್ಟೇ' ಎಂದು ಹೇಳಲು ಬರುವುದಿಲ್ಲ. ಸಾಮಾನ್ಯವಾಗಿ ಅದಕ್ಕೆ ಈ ಕೆಳಗಿನ ಮೂರು-ನಾಲ್ಕು ಅರ್ಥಗಳನ್ನು ಹೇಳಲಾಗುತ್ತದೆ.

೧) ಮೂಲತಃ 'ಚಾರ್ವಾಕ' ಇದು ಈ ದರ್ಶನದ ಸಂಸ್ಥಾಪಕನಾದಬೃಹಸ್ಪತಿಯು ತನ್ನ ದರ್ಶನವನ್ನು ಮತ್ತು ಸಿದ್ಧಾಂತವನ್ನು ಮೊಟ್ಟಮೊದಲು ಯಾರಿಗೆ ಬೋಧಿಸಿದನೋ ಆ ಶಿಷ್ಯನ ಹೆಸರು (ಜರ್ಮನ್ ವಿದ್ವಾಂಸ ಮ್ಯಾಕ್ಸಿಮುಲ್ಲರ್ ಈ ಅರ್ಥವನ್ನು ಸಮರ್ಥಿಸಿದ್ದಾನೆ),

ಮಹಾಭಾರತದಲ್ಲಿ 'ಚಾರ್ವಾಕ' ಎಂಬ ಹೆಸರಿನ ವ್ಯಕ್ತಿಯೊಬ್ಬನು ಯುಧಿಷ್ಠಿರನಿಗೆ ಭೆಟ್ಟಿಯಾಗಿದ್ದನೆಂಬ ಉಲ್ಲೇಖ ಬರುತ್ತದೆ.

೨) 'ಚಾರ್ವಾಕ' ಎಂಬ ಶಬ್ದವು ಸಂಸ್ಕೃತದ 'ಚರ್ವ' (ತಿನ್ನು) ಎಂಬ ಧಾತುವಿನಿಂದ ಉತ್ಪನ್ನವಾಗಿರುತ್ತದೆಂದೂ, ಈ ಮತದ ದಾರ್ಶನಿಕರು ಕೇವಲ ತಿಂದುಂಡು ಸುಖವನ್ನು ಭೋಗಿಸುವಂಥವರಾಗಿದ್ದು ಯಾವುದೇ ಧಾರ್ಮಿಕ ಇಲ್ಲವೇ ನೈತಿಕ ಹೊಣೆಗಾರಿಕೆಯನ್ನು ಒಪ್ಪಿಕೊಳ್ಳದಂಥವರಾಗಿದ್ದುದರಿಂದ, ಅವರನ್ನು 'ಚಾರ್ವಾಕರು', ಎಂದರೆ 'ಬರೀ ತಿನ್ನುಣ್ಣುವಂಥವರು' ಎಂದುಕರೆಯುತ್ತಿದ್ದರು ಎಂದೂ ಇನ್ನೊಂದು ಅರ್ಥವಿವರಣೆ ಇದೆ (ಇದನ್ನು ದಿ. ಡಾ. ಎಸ್. ಎನ್. ದಾಸಗುಪ್ತ ಅನುಮೋದಿಸಿದ್ದಾರೆ).

೩) 'ಚಾರ್ವಾಕ' ಶಬ್ದವನ್ನು 'ಚಾರು+ವಾಕ್' ಎಂದು ವಿಶ್ಲೇಷಿಸಬೇಕೆಂದೂ ಹಾಗೆ ವಿಶ್ಲೇಷಿಸಿ ಅದರ ಅರ್ಥವನ್ನು 'ಸುಂದರವಾಗಿ, ಎಂದರೆ ಸವಿಯಾಗಿ, ಮಾತನಾಡುವಂಥವರು' (the sweet tongued ones) ಎಂಬುದಾಗಿ ನಿಷ್ಪತ್ತಿಸುವುದು ಹೆಚ್ಚು ಸೂಕ್ತ. ಹಾಗೆ ಮಾಡಿದಲ್ಲಿ ಅದು ಚಾರ್ವಾಕರ ಮೇಲ್ನೋಟಕ್ಕೆ ಆಕರ್ಷಣೀಯವಾಗಿ ಕಾಣುವ ಥಳಕಿನ ಸಿದ್ಧಾಂತಕ್ಕೆ ಹೆಚ್ಚು ಯಥಾರ್ಥವಾಗಿ ಅನ್ವಯಿಸುತ್ತದೆ ಅನ್ನುವುದು ಸಂಸ್ಕೃತ ವ್ಯಾಕರಣದ ಕರ್ತೃವಾದ ವ್ಹಿಟ್ನೇಯ ಮತ್ತು ದಿ. ಪ್ರೊ. ಎಂ. ಹಿರಿಯಣ್ಣನವರ ಅಭಿಪ್ರಾಯವಾಗಿರುತ್ತದೆ.



## ಚಾರ್ವಾಕ ಮತ್ತು ಲೋಕಾಯತ

ಚಾರ್ವಾಕಮತವು 'ಲೋಕಾಯತ ಮತ' ಎಂಬ ಇನ್ನೊಂದು ಹೆಸರಿನಿಂದಲೂ ಪ್ರಸಿದ್ಧವಿದೆ. 'ಲೋಕಾಯತ' ಎಂಬ ಪದಕ್ಕೆ ಸಾಮಾನ್ಯವಾಗಿ ಈ ಕೆಳಗಿನ ಅರ್ಥ-ವಿವರಣೆಗಳನ್ನು ಕೊಡಲಾಗುತ್ತದೆ:

೧) ಚಾರ್ವಾಕ ಮತದ ಸಂಸ್ಥಾಪಕನಾದ ಬೃಹಸ್ಪತಿಯು 'ಲೋಕಾ' ಎಂಬುವಳ ಮಗನಾದ ಕಾರಣ ಅವನಿಂದ ಸ್ಥಾಪಿತವಾದ ಮತಕ್ಕೆ 'ಲೋಕಾಯತ ಮತ' (ಲೋಕಾ ಎಂಬವಳಿಂದ ಬಂದಂಥವನ ಮತ) ಎಂಬ ಹೆಸರು.

೨) ಚಾರ್ವಾಕ ಮತವು ಈ ಲೋಕದ, ಎಂದರೆ ಈ ಜಗತ್ತಿನ, ಅಸ್ತಿತ್ವವನ್ನಷ್ಟೇ ಒಪ್ಪಿಕೊಂಡು ಸ್ವರ್ಗಾದಿ ಪರ ಲೋಕಗಳ ಅಸ್ತಿತ್ವವನ್ನು ನಿರಾಕರಿಸುತ್ತದಾದ್ದರಿಂದ ಅದಕ್ಕೆ "ಲೋಕಾಯತ ಮತ' ಎಂದರೆ 'ಈ ಲೋಕದವರ" ಅಥವಾ "ಈ ಲೋಕವಷ್ಟೇ ಉಂಟು ಎಂದು ಅನ್ನುವವರ' ಮತ ಎಂದು ಹೆಸರು.

೩) 'ಲೋಕಾ' ಎಂದರೆ (ಸಂಸ್ಕೃತದಲ್ಲಿ) 'ಜನರು' ಎಂಬರ್ಥವಿರುವುದರಿಂದ 'ಲೋಕಾಯತ ಮತ" ಎಂದರೆ ಜನರಲ್ಲಿ, ಅರ್ಥಾತ್ ಜನಸಾಮಾನ್ಯರಲ್ಲಿ ಹೆಚ್ಚಾಗಿ ಪ್ರಚಲಿತವಾಗಿರುವ ಮತ ಎಂಬರ್ಥ, 'ಸರ್ವದರ್ಶನ ಸಂಗ್ರಹ'ಕಾರರಾದ ಮಾಧವಾಚಾರ್ಯರು ಈ ಅರ್ಥವನ್ನು ಪುರಸ್ಕರಿಸುತ್ತಾರೆ: 'ಜನಸಾಮಾನ್ಯರಲ್ಲಿ ಹೆಚ್ಚಿನವರು ಅನುಕೂಲ ಸಿಂಧು ಮತ್ತು ಸುಖಾನುಭೋಗ-ಸಂಹಿತೆಗಳ ಪ್ರಕಾರ ಅರ್ಥ ಮತ್ತು ಕಾಮ ಇವೆರಡೇ ಪರಮ ಪುರುಷಾರ್ಥಗಳೆಂದು ಭಾವಿಸಿ, ಪರಲೋಕದಲ್ಲಿನ ವಸ್ತುಗಳೆಲ್ಲವುಗಳ ಅಸ್ತಿತ್ವವನ್ನು ಅಲ್ಲಗಳೆದು, ಕೇವಲ ಚಾರ್ವಾಕ-ಸಿದ್ಧಾಂತವನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ. ಆದ್ದರಿಂದ ಆ ಸಿದ್ಧಾಂತಕ್ಕೆ 'ಲೋಕಾಯತ ಮತ" ಎಂತ ಎಂಬ ಇನ್ನೊಂದು ಹೆಸರು. ಈ ಹೆಸರು ತುಂಬಾ ಅನ್ವರ್ಥಕವೇ ಆಗಿದೆ.' [ಸರ್ವದರ್ಶನ ಸಂಗ್ರಹ' ಪ್ರಕರಣ ೧, ಚಾರ್ವಾಕದರ್ಶನ, ಪ್ಯಾರಾ ೧. (ಕನ್ನಡಾನುವಾದ ನನ್ನದು)] ಹೀಗೆ 'ಲೋಕಾಯತ ಮತ" ಎಂದರೆ ಲೋಕದಲ್ಲಿ ಅಥವಾ ಜನರಲ್ಲಿ ರೂಢಿಯಲ್ಲಿರುವ ಮತ ಸಿದ್ಧಾಂತ ಎಂಬ ಈ ಮೇಲೆ ವಿವರಿಸಿದ ಅರ್ಥವನ್ನು ಮಾಧವಾಚಾರ್ಯರಂತೆ ಇನ್ನೂ ಅನೇಕ ದಾರ್ಶನಿಕರು ಮತ್ತು ವಿದ್ವಾಂಸರು ಪುರಸ್ಕರಿಸುತ್ತಾರೆ. ಈ ಅರ್ಥವನ್ನು ಪುರಸ್ಕರಿಸುವಲ್ಲಿ ನಾವು ಒಂದು ಐತಿಹಾಸಿಕ ಸಂಗತಿಯನ್ನು ಗಮನಿಸಬೇಕೆಂದು ನನಗೆ ಅನಿಸುತ್ತದೆ. ಅದೆಂದರೆ, ಈಗ ನಮಗೆ ಗೊತ್ತಿರುವ ಹಾಗೆ, ನಮ್ಮ ದೇಶದ ಇತಿಹಾಸದ ಯಾವ ಕಾಲದಲ್ಲೂ ಅಥವಾ ಯುಗದಲ್ಲೂ (ಪ್ರಾಚೀನವಾಗಲಿ, ಅರ್ವಾಚೀನವಾಗಲಿ ಅಥವಾ ಆಧುನಿಕವಾಗಲಿ)ಚಾರ್ವಾಕ ಅಥವಾ ಲೋಕಾಯತ ಮತವು ತಾತ್ವಿಕವಾಗಿ ಅಥವಾ ವೈಚಾ

ರಿಕವಾಗಿ (Theoretically) ಹೆಚ್ಚಿನ ಜನರ, ಇಲ್ಲವೆ ಜನಸಾಮಾನ್ಯರ, ದರ್ಶನ ಅಥವಾ ಸಿದ್ಧಾಂತವಾಗಿದ್ದಂತೆ ಕಂಡು ಬರುವದಿಲ್ಲ. ಹೀಗಿದ್ದ ಮೇಲೆ ಚಾರ್ವಾಕ ಅಥವಾ ಲೋಕಾಯತ ಮತವು ಜನಸಾಮಾನ್ಯರ ಮತ ಎಂದು ನಾವು ಯಾವ ಅರ್ಥದಲ್ಲಿ ತಾನೇ ಹೇಳಬಹುದು ? ನಾವು ಹೀಗೆ ಹೇಳಬಹುದಾದ ಒಂದೇ ಅರ್ಥವೆಂದರೆ ಲೋಕಾಯತ ಮತವು ತಾತ್ವಿಕವಾಗಿ, ವೈಚಾರಿಕವಾಗಿ ಹಾಗೂ ಶಾಬ್ದಿಕವಾಗಿ ಯಾವ ಕಾಲದಲ್ಲೂ ಜನಸಾಮಾನ್ಯರ ಮತವಾಗಿರದೇ ಇದ್ದರೂ ಅದು ಹೆಚ್ಚಿನ ಜನರ ಪ್ರತ್ಯಕ್ಷ ಆಚಾರದಲ್ಲಿ ಅವರ ದಿನನಿತ್ಯದ ವ್ಯವಹಾರಗಳಲ್ಲಿ ಎಲ್ಲ ಕಾಲ್ಲಥಲ್ಲೂ ಸ್ಫುಟವಾಗಿ ವ್ಯಕ್ತವಾಗುವಂಥ ದರ್ಶನ ಅಥವಾ ತತ್ತ್ವಸಿದ್ಧಾಂತವಾಗಿರುತ್ತದೆ. ಅನ್ನುವುದು! ಇರಲಿ. ಇವಿಷ್ಟು ಚಾರ್ವಾಕ ದರ್ಶನದ ಹೆಸರಿನ ವಿಚಾರವಾಯ್ತು. ಇನ್ನು ಈ ಹೆಸರಿನ ಒಳಗೆ ಇರುವ ದರ್ಶನದ ಅಥವಾ ಸಿದ್ಧಾಂತದ 'ಅಂತರ್ಯ'ದ ವಿಚಾರ:

**ಚಾರ್ವಾಕರ ಪ್ರಮಾಣ-ಸಿದ್ಧಾಂತ (Epistemology) :**

ಚಾರ್ವಾಕ ಮತದ ಪ್ರಕಾರ ಖಾತ್ರಿ (Certain) ಯಾದ ನಿರ್ದುಷ್ಟ (Valid) ವಾದ ಮತ್ತು ಯಥಾರ್ಥ (True) ವಾದ ಜ್ಞಾನಕ್ಕೆ 'ಪ್ರತ್ಯಕ್ಷ' (Perception) ವೇ ಪ್ರಮಾಣವು. ಇನ್ನಿತರ ಭಾರತೀಯ ತತ್ವಸಿದ್ಧಾಂತಗಳು ಒಪ್ಪಿಕೊಳ್ಳುವ 'ಅನುಮಾನ' (Inference) ಹಾಗೂ 'ಶಬ್ದ ಮತ್ತು 'ಶ್ರುತಿ' (Verbal and Vedic Testimony) ಗಳನ್ನು ಜ್ಞಾನಕ್ಕೆ ಯೋಗ್ಯವಾದ ಆಧಾರಗಳೆಂದು ಅಥವಾ ಪ್ರಮಾಣಗಳೆಂದು ಚಾರ್ವಾಕ ಸಿದ್ಧಾಂತವು ಒಪ್ಪಿಕೊಳ್ಳುವುದಿಲ್ಲ. [ಈ ವಿಷಯದಲ್ಲಿ ಸ್ವಲ್ಪ ಭಿನ್ನಾಭಿಪ್ರಾಯವಿದೆ. ಕೆಲವು ಚಾರ್ವಾಕರು 'ಅನುಮಾನ' ದ ಕೆಲವು ಪ್ರಕಾರಗಳನ್ನು ಮಾತ್ರ ತಿರಸ್ಕರಿಸಿದ್ದರೆಂದೂ, ಇಡೀ ಅನುಮಾನ ಪ್ರಮಾಣವನ್ನಲ್ಲವೆಂದೂ, 'ನ್ಯಾಯಮಂಜರಿ' ಮುಂತಾದ ಕೆಲವು ಪ್ರಾಚೀನ ಗ್ರಂಥಗಳಿಂದ ತಿಳಿದುಬರುವುದು.]

**ನ್ಯಾಯ ಅಥವಾ ಅನುಮಾನ ಪ್ರಾಮಾಣ್ಯವನ್ನು ಕುರಿತು ಚಾರ್ವಾಕ ವಿಮರ್ಶೆಯು ಮುಖ್ಯವಾಗಿ ಹೀಗಿದೆ :**

೧) ನ್ಯಾಯ ಅಥವಾ ಅನುಮಾನ ಮುಖೇನ ನಾವು ತಲುಪುವ ತೀರ್ಮಾನವು ಅಥವಾ ನಿರ್ಣಯವು ಮೂಲದಲ್ಲಿ ಪ್ರತ್ಯಕ್ಷಾನುಭೂತ ಸತ್ಯವನ್ನೇ ಅವಲಂಬಿಸಿರುವಂಥದು.

೨) ಪ್ರತ್ಯಕ್ಷ ವೇದ್ಯ ವಸ್ತುಗಳಿಂದ ಅನುಮಾನ-ವ್ಯಾಪ್ತಿಯು (Inferentiul Relation) ತಂತಾನೆ ಹುಟ್ಟಿಕೊಳ್ಳುವುದಿಲ್ಲ.



೩) ಅನುಮಾನ-ಸಿದ್ಧಜ್ಞಾನವು (Inferential knowledge) ಅನೇಕಬಾರಿ ಪ್ರತ್ಯಕ್ಷ-ಜ್ಞಾನ (Direct or Perceptual knowledge) ದಿಂದ ಅಲ್ಲಗಳೆಯಲ್ಪಡುತ್ತದೆ.

೪) ಅನುಮಾನ ಕ್ರಿಯೆಗೆ ಆಧಾರಭೂತವಾದ 'ವ್ಯಾಪ್ತಿ' (Necessary relation) ಯನ್ನು ಸಿದ್ಧಮಾಡುವ ಯಾವ ಅಂಶವೂ ಆ ಕ್ರಿಯೆಯಲ್ಲಿಲ್ಲ.

೫) ಪ್ರತ್ಯಕ್ಷಾನುಭವಜನ್ಯಜ್ಞಾನದ ಸ್ಫುಟವಾದ ಭಾವನೆಗಳೊಂದಿಗೆ ಹೋಲಿಸಿದರೆ ಅನುಮಾನ ಅಥವಾ ತರ್ಕ (ನಿಗಮನ ಅಥವಾ ಅನುಗಮನ) ಸಿದ್ಧಜ್ಞಾನದಿಂದ ನಮ್ಮ ಮನಸ್ಸಿನಲ್ಲಿ ಉಂಟಾಗುವ ಭಾವನೆಗಳು ಅಥವಾ ಅಭಿಪ್ರಾಯಗಳು ಮಸಕಮಸಕಾಗಿರುತ್ತವೆ.

೬) ತರ್ಕ ಅಥವಾ ಅನುಮಾನ ಎಂದರೆ ಗೊತ್ತಿರುವ ವಿಷಯದಿಂದ ಗೊತ್ತಿರದ ವಿಷಯಕ್ಕೆ ನಮ್ಮ ಅರಿವಿನ ಅಥವಾ ಬುದ್ಧಿಯ ಅನಿಶ್ಚಿತ ಸ್ವರೂಪದ ನೆಗೆತ. ಉದಾ: ನಾವು ಒಂದು ಪರ್ವತ ಪ್ರದೇಶದಲ್ಲಿ ನೋಡಿದ ಹೊಗೆಯ ದೃಶ್ಯದಿಂದ ಅಲ್ಲಿ ಬೆಂಕಿ ಇದೆ ಅನ್ನುವುದನ್ನು ಅನುಮಾನಿಸಿದಾಗ ಅಥವಾ ತರ್ಕಿಸಿದಾಗ ನಮ್ಮ ಬುದ್ಧಿಯು ನಾವು ನೋಡಿದ ಹೊಗೆಯಿಂದ ನಾವು ನೋಡದಿರುವ ಬೆಂಕಿಯೆಡೆಗೆ ಅರಿವಿನ ಅಂಧಕಾರ-ಸ್ಥಿತಿಯಲ್ಲಿ ನೆಗೆಯುತ್ತದೆ. ಇಲ್ಲಿ ನೈಯ್ಯಾಯಿಕರಂಥ ತರ್ಕಶಾಸ್ತ್ರಜ್ಞರು ಪ್ರಾಯಶಃ ನಮ್ಮ ಬುದ್ಧಿಯ ಇಂಥ ನೆಗೆತವು ಹೊಗೆ ಮತ್ತು ಬೆಂಕಿ ಇವುಗಳ ನಡುವಣ ಅವ್ಯಾಹತವಾದ 'ವ್ಯಾಪ್ತಿ' ಯನ್ನು ಕುರಿತ ಈ ಮೊದಲಿನ ನಮ್ಮ ಜ್ಞಾನದಿಂದಾಗಿ ಸಮರ್ಥನೀಯವೆನಿಸುತ್ತದೆ ಎಂಬುದನ್ನು ಎತ್ತಿ ತೋರಿಸುತ್ತ ಇಲ್ಲಿ ವಾದದ ಅಥವಾ ಅನುಮಾನ-ಕ್ರಿಯೆಯ ಸಂಪೂರ್ಣವಾದ ಅಭಿವ್ಯಕ್ತಿಯು ಈ ಕೆಳಗಿನಂತಿರುತ್ತದೆಂದು ಹೇಳುತ್ತಾರೆ :

೧) ಹೊಗೆಯಿರುವಂಥ ಎಲ್ಲ ಸನ್ನಿವೇಶಗಳಲ್ಲಿ ಬೆಂಕಿಯಿರುವುದು ಕಂಡು ಬರುತ್ತದೆ

೨) ಈ ಪರ್ವತದ ಸನ್ನಿವೇಶವು ಹೊಗೆಯಿರುವಂಥ ಒಂದು ಸನ್ನಿವೇಶವಾಗಿರುತ್ತದೆ.

೩) ಆದುದರಿಂದ ಈ ಪರ್ವತದ ಸನ್ನಿವೇಶವು ಬೆಂಕಿಯಿರುವಂಥ ಒಂದು ಸನ್ನಿವೇಶವಾಗಿರುತ್ತದೆ (ನಿರ್ಣಯ) ಈ ಬಗೆಯ ತರ್ಕದ ಅಥವಾ ಅನುಮಾನದ ಸ್ವರೂಪವನ್ನು ವಿಮರ್ಶಿಸುತ್ತ ಚಾರ್ವಾಕರು ಹೀಗೆ ಹೇಳುತ್ತಾರೆ :

ಈ ಮೇಲಿನ ನಿರ್ಣಯವು ಈ ವಾದದಲ್ಲಿ ಮಧ್ಯ ಪದ (Middle Term)

ವಾಗಿರುವ 'ಹೊಗೆ' ಮತ್ತು ಸಾಧ್ಯಪದ (Major Term) ವಾಗಿರುವ ಬೆಂಕಿ ಇವೆರಡರ ನಡುವೆ 'ವ್ಯಾಪ್ತಿ' (Invariable Relation)ಯನ್ನು ಪ್ರತಿಪಾದಿಸುವಂಥ ಸಾಧ್ಯ-ವಾಕ್ಯ (Major Premise) ವು ನಿಃಸಂಶಯವಾಗಿಯೂ ಸತ್ಯವನ್ನು ಹೇಳುತ್ತಿದ್ದರೆ ಮಾತ್ರ ತರ್ಕಸಮ್ಮತವೆನಿಸುತ್ತದೆ. ಆದರೆ 'ಹೊಗೆ' ಇರುವಂಥ ಎಲ್ಲಾ ಸನ್ನಿವೇಶಗಳಲ್ಲಿ ಬೆಂಕಿಯ ಉಪಸ್ಥಿತಿ (Presence) ಇದೆ ಎನ್ನುವುದರ ಸಂಪೂರ್ಣ (ಎಂದರೆ ಇಂಥ ಎಲ್ಲಾ ಸನ್ನಿವೇಶಗಳ ಪರಿಜ್ಞಾನ ನಮಗಿರುವುದು ಸಾಧ್ಯವಿಲ್ಲ. ಯಾಕೆಂದರೆ, ಭೂತ ಮತ್ತು ಭವಿಷ್ಯತ್ ಕಾಲಗಳಲ್ಲಿನ ಇಂಥ ಸನ್ನಿವೇಶಗಳ ಮಾತು ಒತ್ತಟ್ಟಿಗಿರಲಿ, ಈಗ ವರ್ತಮಾನ ಕಾಲದಲ್ಲಿ ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿರುವ ಹೊಗೆ ಮತ್ತು ಬೆಂಕಿಗಳ ಎಲ್ಲಾ ಸನ್ನಿವೇಶಗಳ್ನು ಈಕ್ಷಿಸುವುದು ಕೂಡ ನಮಗೆ ಸಾಧ್ಯವಿಲ್ಲ. ಆದ್ದರಿಂದ ಪ್ರತ್ಯಕ್ಷಾನುಭವದ ಆಧಾರದ ಮೇಲೆ 'ವ್ಯಾಪ್ತಿ' ಯನ್ನು ಸಿದ್ಧ ಮಾಡುವುದೂ ಸಾಧ್ಯವಿಲ್ಲ. ಇನ್ನು ಈ 'ವ್ಯಾಪ್ತಿ' ಯು ಬೇರೊಂದು ಅನುಮಾನ (Inference)ವನ್ನು ಆಧರಿಸಿರುತ್ತದೆ ಎಂದು ಹೇಳುವುದು ಕೂಡ ಸಾಧ್ಯವಿಲ್ಲ. ಯಾಕೆಂದರೆ, ನಾವು ಹಾಗೆ ಹೇಳಿದರೆ ಆ ಬೇರೊಂದು ಅನುಮಾನ (Inference) ದ ತರ್ಕಬದ್ಧತೆಯನ್ನು ಸಹ ನಾವು ಇದೇ ರೀತಿಯಾಗಿ ಸಿದ್ಧವಾಡಬೇಕಾಗುತ್ತದೆ.

ಳ) ಇನ್ನು ಈ 'ಹೊಗೆಯ ಸನ್ನಿವೇಶ' ಮತ್ತು ಬೆಂಕಿಯ ಎಲ್ಲಾ ಸನ್ನಿವೇಶಗಳಲ್ಲೂ ತಪ್ಪದೇ ಹಾಜರ್ ಇರುವಂಥ 'ಹೊಗೆತನ' (Smokeness) ಮತ್ತು 'ಬೆಂಕಿತನ' (fireness) ಇವುಗಳಂಥ ಯಾವುದೇ 'ಸಾಮಾನ್ಯ"ಗಳ (Univesals or class-characters) ಪ್ರತ್ಯಕ್ಷ-ದರ್ಶನದ ಆಧಾರದಿಂದ ಸಿದ್ಧಮಾಡುವುದು ಕೂಡ ಸಾಧ್ಯವಿಲ್ಲ. ಯಾಕೆಂದರೆ ಅಂಥ 'ಸಾಮಾನ್ಯ"ಗಳು ಪ್ರತ್ಯಕ್ಷ-ಗೋಚರವಲ್ಲ.

ಱ) ಹಾಗೆಯೇ ಈ 'ವ್ಯಾಪ್ತಿ'ಯನ್ನು ನಾವು ಕಾರ್ಯ-ಕಾರಣ ಸಂಬಂಧದ ಆಧಾರದ ಮೇಲಿಂದ ಕೂಡ ಸಿದ್ಧಮಾಡುವುದು ಸಾಧ್ಯವಿಲ್ಲ. ಯಾಕೆಂದರೆ ಕಾರ್ಯ ಕಾರಣ ಸಂಬಂಧವು ಕೂಡ ಒಂದು ಪ್ರಕಾರದ 'ವ್ಯಾಪ್ತಿ'ಯೇ ಆಗಿರುವುದರಿಂದ ಅದನ್ನು ಕೂಡ, ಈ ಮೇಲೆ ಹೇಳಿದ ಕಾರಣಗಳಿಂದಾಗಿ ಪ್ರತ್ಯಕ್ಷಾನುಭವದಿಂದ ಸಿದ್ಧ ಮಾಡುವುದು ಸಾಧ್ಯವಿಲ್ಲ.

ೞ) ನಮ್ಮ ವಿಭಿನ್ನ ಅನುಭವಗಳಲ್ಲಿ ಅನೇಕ ಸಲ ಕಂಡುಬರುವ ಏಕರೂಪತೆಗಳಿಗೆ (Uniformities) ಅಥವಾ ಸಾದೃಶ್ಯತೆಳಿಗೆ (Similarities) ವಸ್ತುಗಳಲ್ಲಿ ಅಂತರ್ಗತವಾಗಿರುವ ಅವುಗಳ ಸ್ವಭಾವ ಗುಣಗಳೇ ಕಾರಣವಾಗಿರು



ತ್ತವೆ. ಮತ್ತು ಈ ಸ್ವಭಾವ ಗುಣಗಳು ಕಾಲಾಂತರದಲ್ಲಿ ಬದಲಾವಣೆ ಹೊಂದಬಲ್ಲಂಥವಾಗಿರುತ್ತವೆ. ಹೀಗಾಗಿ 'ವ್ಯಾಪ್ತಿ' ಯನ್ನು ನಾವು ನಮ್ಮ ವಿಭಿನ್ನ ಅನುಭವಗಳಲ್ಲಿ ವ್ಯಕ್ತವಾಗುವ ಏಕರೂಪತೆಯ ಆಧಾರದ ಮೇಲಿಂದ ಸಹ ಸಿದ್ಧ ಮಾಡುವುದು ಸಾಧ್ಯವಿಲ್ಲ.
ಆದ್ದರಿಂದ 'ವ್ಯಾಪ್ತಿ'ಯ ಆಧಾರದ ಮೇಲೆ ನಿಂತಿರುವ ಅನುಮಾನ-ಪ್ರಾಮಾಣ್ಯವನ್ನು ನಾವು ಒಪ್ಪುವುದು ಸಾಧ್ಯವಿಲ್ಲ.

**ಶಬ್ದ-ಪ್ರಾಮಾಣ್ಯ ಮತ್ತು ಶ್ರುತಿ-ಪ್ರಾಮಾಣ್ಯ :**

ಚಾರ್ವಾಕರು ಶ್ರುತಿ ಗ್ರಂಥಗಳ (ವೇದೋಪನಿಷತ್ತುಗಳ) ಪ್ರಾಮಾಣ್ಯವನ್ನು ಮೂಲಭೂತವಾಗಿ ನಿರಾಕರಿಸಿದ್ದರು ಅವರ ಈ ನಿರಾಕರಣೆಗೆ ಅವರು ಶಬ್ದ-ಪ್ರಾಮಾಣ್ಯ (Verbal Testimony) ವನ್ನು ಅತ್ಯಂತ ಸೀಮಿತ ಅರ್ಥದಲ್ಲಿ ಮತ್ತು ವ್ಯಾಪ್ತಿಯಲ್ಲಿ ಮಾತ್ರ ಒಪ್ಪಿಕೊಳ್ಳುತ್ತಿದ್ದುದು, ವೇದೋಪನಿಷತ್ತುಗಳ ಅಪೌರುಷೇಯತ್ವವನ್ನೇ ಅವರು ಮೂಲಭೂತವಾಗಿ ಪ್ರಶ್ನಿಸುತ್ತಿದ್ದುದು ಹಾಗೂ ಅವರು ಮುಕ್ತ ವಿಚಾರಧಾರೆಯ ಪುರಸ್ಕರ್ತರಾಗಿದ್ದುದು ಮುಖ್ಯ ಕಾರಣಗಳಾಗಿದ್ದವು.

**ಶಬ್ದ-ಪ್ರಾಮಾಣ್ಯ**

ಭಾರತದ ಆಸ್ತಿಕ ದರ್ಶನ (ವೇದಪ್ರಾಮಾಣ್ಯವನ್ನು ಒಪ್ಪುವ ದರ್ಶನ) ಗಳಿಗೆಲ್ಲ ಹಾಗೂ ಬೌದ್ಧ ಮತ್ತು ಜೈನ ಈ ನಾಸ್ತಿಕ [ವೇದಪ್ರಾಮಾಣ್ಯವನ್ನು ಒಪ್ಪದಿರುವ] ದರ್ಶನಗಳಿಗೆ ಕೂಡ ಮಾನ್ಯವಾಗಿರುವ ಶಬ್ದ-ಪ್ರಾಮಾಣ್ಯ (The Evidence of Verbal Testimony) ವನ್ನು ಕುರಿತು ಚಾರ್ವಾಕರ ಅಭಿಪ್ರಾಯ ಹೀಗಿದೆ.: ನಾವು ನೇರವಾಗಿ, ಎಂದರೆ ಪ್ರತ್ಯಕ್ಷವಾಗಿ ಕೇಳುವ 'ಶಬ್ದ' ವು ನಾವು ಕೇಳಿದಷ್ಟರ ಮಟ್ಟಿಗೆ ಮಾತ್ರ ನಂಬಲರ್ಹವಾದ ಪ್ರಮಾಣವಾಗಬಹುದು. ಆದರೆ ಆ ಮಟ್ಟಿಗೆ 'ಶಬ್ದ' ವು ಕೂಡ 'ಪ್ರತ್ಯಕ್ಷ-ಜ್ಞಾನ' )Perceptual knowledge) ಎಂದೇ ಅನಿಸುವುದು. ಆದರೆ ನಾವು ಕೇಳುವ ಶಬ್ದವು ನಾವು ಕೇಳದ್ದನ್ನು ಮತ್ತು ಕಾಣದ್ದನ್ನು ಕುರಿತು ಹೇಳಿದರೆ [ಉದಾ: ವೇಧಾದಿ ಸ್ಮೃತಿಗಳು ಹೇಳುವಂತೆ) ಆಗ ಅದು ಸಂಪೂರ್ಣವಾಗಿ ವಿಶ್ವಸನೀಯವಾದ ಪ್ರಮಾಣವೆಂದೆನಿಸಲಾರದು.

**ಶ್ರುತಿ-ಪ್ರಾಮಾಣ್ಯ :**

ಅನೇಕರು ವೇದಾದಿ ಶ್ರುತಿ ವಾಕ್ಯಗಳನ್ನು ಪ್ರಮಾಣವೆಂದು ಶ್ರದ್ಧಾಪೂರ್ವಕವಾಗಿ ತಿಳಿಯುತ್ತಾರೆ. ಆದರೆ ನಿಜವಾಗಿ ನೋಡಿದರೆ, ವೇದಾದಿ ಶ್ರುತಿಗ್ರಂಥಗಳು ಅಜ್ಞ ಮತ್ತು ಮುಗ್ಧ ಜನರನ್ನು ನಂಬಿಸಿ, ವಂಚಿಸಿ ಅವರಿಂದ ದುಡ್ಡು ಸೆಳೆಯುವಂಥ ಕೆಲವು ಧೂರ್ತ ಪುರೋಹಿತವರ್ಗದ ಜನರ ಕೃತಿಗಳಾಗಿವೆ, ಅಷ್ಟೇ. ನಿಜವಾಗಿ

ನೋಡಿದರೆ, ವೈದಿಕ ಕರ್ಮಾಚರಣೆಯಿಂದ ನಮಗೆ ಸ್ವರ್ಗಪ್ರಾಪ್ತಿ ಮುಂತಾದ ಯಾವ ಲಾಭವೂ ಇಲ್ಲ. ಅವುಗಳಿಂದ ಆಗುವ ಲಾಭ ಪುರೋಹಿತರುಗಳಿಗೆ ಮಾತ್ರ–ದಾನ ದಕ್ಷಿಣೆಗಳ ರೂಪದಲ್ಲಿ.

**ಚಾರ್ವಾಕರ ಅಸ್ತಿತ್ವತತ್ವ ಸಿದ್ಧಾಂತ (Ontology) :**

ಚಾರ್ವಾಕರ ಅಸ್ತಿತ್ವತತ್ವ ಸಿದ್ಧಾಂತ (Ontology)ವು ಭೌತವಾದ (Materialism)ವಾಗಿತ್ತು[2]. ಆದರೆ ಪಂಚಮಹಾಭೂತಗಳ ಪೈಕಿ ಚಾರ್ವಾಕರು ಪೃಥ್ವಿ, ಅಗ್ನಿ, ಜಲ ಮತ್ತು ವಾಯು ಈ ನಾಲ್ಕನ್ನು ಮಾತ್ರ ಒಪ್ಪಿಕೊಂಡಿದ್ದರು. ಐದನೆಯದಾದ 'ಆಕಾಶ'ವು ಪ್ರತ್ಯಕ್ಷ-ಗೋಚರವಲ್ಲವೆಂದು ಚಾರ್ವಾಕರು ಅದರ ಅಸ್ತಿತ್ವವನ್ನು ಒಪ್ಪಿಕೊಂಡಿರಲಿಲ್ಲ. ತಾವು ಒಪ್ಪಿಕೊಂಡ ಈ ಚತುರ್ಮಹಾಭೂತಗಳಿಂದಲೇ ಪ್ರಪಂಚದ ಸಮಸ್ತವಸ್ತುಗಳು ಮತ್ತು ಸಮಸ್ತಜೀವಿಗಳು ಉಂಟಾಗಿರುತ್ತವೆಂದು ಅವರು ತಿಳಿದಿದ್ದರು.

ಆತ್ಮ: ದೇಹದಿಂದ ಭಿನ್ನವಾಗಿರಬಹುದಾದಂಥ, ವಿಭಿನ್ನದೇಹಗಳನ್ನು ಜನ್ಮಾಂತರಗಳಲ್ಲಿ ಧಾರಣ ಮಾಡಬಹುದಾದಂಥ, ಇಂದ್ರಿಯ ಗೋಚರವಾಗದಷ್ಟು ಸೂಕ್ಷ್ಮವಾದಂಥ, ಹುಟ್ಟು-ಸಾವುಗಳು ಇಲ್ಲದೆ ಅಮರವಾದಂಥ ಮತ್ತು ಅಭೌತಿಕವಾದಂಥ ಶುದ್ಧ ಚೈತನ್ಯ ಅಥವಾ ಪ್ರಜ್ಞಾ-ಸ್ವರೂಪದ 'ಆತ್ಮ' ಎಂಬ ವಸ್ತುವು ಇಲ್ಲ ಎನ್ನುವುದು ಖಟ್ಟಾ ಭೌತವಾದಿಗಳಾಗಿದ್ದ ಚಾರ್ವಾಕರ ಖಚಿತವಾದ ಅಭಿಪ್ರಾಯವಾಗಿತ್ತು. ವೇದ ವೇದಾಂತ ಮುಂತಾದ ಆಧ್ಯಾತ್ಮಗ್ರಂಥಗಳು ಯಾವುದನ್ನು 'ಆತ್ಮ' ಎಂದು ಕರೆಯುವುವೋ ಅದು 'ಚೈತನ್ಯವಿಶಿಷ್ಟವಾದ ದೇಹ'ವೇ ವಿನಾ ಬೇರೇನೂ ಅಲ್ಲ ಅನ್ನುವುದು ಅವರ ವಾದವಾಗಿತ್ತು. ಚಾರ್ವಾಕರು ಪ್ರಜ್ಞೆಯ ಅಥವಾ ಚೈತನ್ಯ (Consciousness)ದ ಅಸ್ತಿತ್ವವನ್ನು ಒಪ್ಪುತ್ತಿದ್ದರು. [ಈ ಬಾಬತ್ತಿನಲ್ಲಿ ಚಾರ್ವಾಕರ ಸಿದ್ಧಾಂತವು ವ್ಯಾಟ್ಸನ್, ಪಾವ್ಲೋವ್ ಮುಂತಾದ ಆಧುನಿಕ ಕಾಲದ ಶೀಘ್ರಗಾಮಿ ಚರ್ಯಾಮೂಲ ತತ್ವವಾದಿಗಳ (Radical Behaviourists) ಸಿದ್ಧಾಂತಕ್ಕಿಂತ ಭಿನ್ನವಾಗಿತ್ತು];

(ಮುಂದುವರಿಯುತ್ತದೆ)

2, ಜಯರಾಶಿ ಭಟ್ಟನ 'ತತ್ವೋಪಪ್ಲವ ಸಿಂಹ'ವು ಚಾರ್ವಾಕ ಸಿದ್ಧಾಂತದ ಪ್ರಮುಖ ಗ್ರಂಥಗಳಲ್ಲೊಂದೆಂದು ಪರಿಗಣಿತವಾಗಿದೆ (ನೋಡಿ: A source book in Indian Philosophy, ed. S. Radhakrishnan & C. A. Moore Princeton University Press, 1960, P. 228) ಆದರೆ ಇತ್ತೀಚೆಗೆ ವಾಲ್ಟರ್ ರೂಬೆನ್ ಮತ್ತು ಡೇಲ್ ರೈಪೆ ಮುಂತಾದ ಪಾಶ್ಚಾತ್ಯ ವಿದ್ವಾಂಸರು ನಡೆಸಿದ ಸಂಶೋಧನೆಯಿಂದ ಜಯರಾಶಿ ಭಟ್ಟನು ಭೌತವಾದಿಯಾಗಿರದೆ ಕೇವಲ ಸ್ವಭಾವವಾದಿ ಇಲ್ಲವೆ ಅಜ್ಞೇಯವಾದಿ (Agnostic) ಯಾಗಿದ್ದನೆಂದು ತಿಳಿದುಬಂದಿದೆ. ಆದ್ದರಿಂದ ಜಯರಾಶಿ ಭಟ್ಟನನ್ನು ನಾವು ಅಸ್ತಿತ್ವತತ್ವ ಸಿದ್ಧಾಂತದಲ್ಲಿ ಚಾರ್ವಾಕನೆಂದು ಪರಿಗಣಿಸದೆ ಕೇವಲ ಪ್ರಮಾಣ ಸಿದ್ಧಾಂತ (Epistemology) ದ ಮಟ್ಟಿಗೆ ಚಾರ್ವಾಕನೆಂದು ಪರಿಗಣಿಸಬೇಕು,



# ನಿಜಗಲ್ಲು ಶ್ರೀ ಉದ್ದಾನ ವೀರಭದ್ರಸ್ವಾಮಿ

—ಜೆ. ಶಾರದ ರಾಜಶೇಖರ್

ಪ್ರಾಚೀನ ಕಾಲದಿಂದಲೂ ದೇವಾಲಯಗಳ ಬಗೆಗೆ ಭಾರತೀಯರಲ್ಲಿ ಪೂಜ್ಯ ಭಾವನೆ ಬೆಳೆದು ಬಂದಿದೆ. ದೇವಾಲಯಗಳು ಪರಮೇಶ್ವರನ ಬಾಹ್ಯ ದೃಷ್ಟಿಯನ್ನು ಮಾನವನ ದೇಹರಚನೆಯನ್ನೂ ಜೀವನದ ಪ್ರಗತಿಯನ್ನೂ ವಾಸ್ತುಶಿಲ್ಪರೂಪದಲ್ಲಿ ಭಕ್ತನಿಗೆ ಜ್ಞಾಪಿಸುವುದಕ್ಕಾಗಿ ನಿರ್ಮಿತವಾಗಿವೆ ಎಂಬುದು ಭಾರತೀಯರ ದೃಷ್ಟಿ. ಭಾರತೀಯರ ದೇವಾಲಯಗಳು ವಿಶೇಷವಾಗಿ ಮನಶ್ಶಾಸ್ತ್ರದ ಸೂತ್ರವನ್ನನುಸರಿಸಿ ನಿರ್ಮಿತವಾಗಿವೆ ಎಂದು ಅಭಿಪ್ರಾಯ ಪಡುವುದು ಸಹಜವಾಗಿದೆ.

ದೇವಾಲಯಗಳೂ ವಿಗ್ರಹಗಳೂ ನಾವು ದೇವರಲ್ಲಿ ನಮಗಿರತಕ್ಕ ಭಕ್ತಿಶ್ರದ್ಧೆಗಳನ್ನೂ ಶರಣಾಗತಿಯನ್ನು ತೋರಿಸತಕ್ಕ ನಿದರ್ಶನಗಳಾಗಿವೆ. ತ್ಯಾಗ ಮತ್ತು ಭಕ್ತಿಯನ್ನು ಪ್ರದರ್ಶಿಸುವ ಪ್ರತೀಕಗಳಾಗಿವೆ. ಹಾಗೆಯೇ ಶ್ರೀ ಉದ್ದಾನ ವೀರಭದ್ರಸ್ವಾಮಿಯು ನಮ್ಮೆಲ್ಲರ ಅಭಿಮಾನದ ದೇವತೆ. ಇಲ್ಲಿಯ ಸನ್ನಿವೇಶ ಸುಂದರವಾದದ್ದು. ನಿಜಗಲ್ಲುದುರ್ಗವು ಚರಿತ್ರಾರ್ಹವಾದ ಪ್ರದೇಶ. ದುರ್ಗದ ಮೇಲೆ ಕೋಟೆಕೊತ್ತಲುಗಳಿವೆ. ಕಂಚಿನದೊಣೆ, ಸಿದ್ಧರದೊಣೆ, ಅಕ್ಕತಂಗಿಯರ ದೊಣೆ, ಆನೆದೊಣೆ ಮೊದಲಾದ ಜಲಪ್ರದೇಶಗಳಿವೆ. ಇಲ್ಲಿ ಹಿಂದಿನ ಕಾಲದಲ್ಲಿ ಮಂಡಲಾಧೀಶ್ವರರು ವಾಸ ಮಾಡುತ್ತಿದ್ದರು. ಕೋಟೆಯ ಒಳಭಾಗದಲ್ಲಿ ಧಾನ್ಯದ ಕಣಜಗಳೂ ಮದ್ದುಗುಂಡುಗಳ ಉಗ್ರಾಣಗಳೂ ಪಾಳೆಯಗಾರರು ವಾಸ ಮಾಡುತ್ತಿದ್ದ ವಸತಿಗೃಹಗಳೂ ಇವೆ. ಬೆಟ್ಟದ ಮೇಲಿನ ಈ ಪ್ರದೇಶವನ್ನು ರಸಸಿದ್ಧರ ಬೆಟ್ಟವೆಂದು ಕರೆಯುತ್ತಿದ್ದರು.

ಬೆಟ್ಟದ ಇಳಿಜಾರು ಪ್ರದೇಶದಲ್ಲಿ, ನಿಜಗಲ್ಲು ಊರಿನ ಮುಖವಾಗಿ ಶ್ರೀಮದುದ್ದಾನ ವೀರಭದ್ರಸ್ವಾಮಿ ದೇವಸ್ಥಾನವಿದೆ. (1545 A D) ಇದರ ಪಕ್ಕದಲ್ಲಿ ಸ್ಥಾವರ ಸಿದ್ಧೇಶ್ವರ ಲಿಂಗವನ್ನೊಳಗೊಂಡ ಗವಿ ದೇವಾಲಯವೂ ಇದೆ.

ಉದ್ದಾನ ವೀರಭದ್ರಸ್ವಾಮಿ ದೇವಾಲಯದಲ್ಲಿ ಅಖಂಡವಾದ ಶಿಲೆಯಲ್ಲಿ ಬಹು ಸುಂದರವಾಗಿ ನಿರ್ದಿಷ್ಟ ಶಾಸ್ತ್ರ ಪ್ರಮಾಣಾನುಸಾರವಾಗಿ ನಿರೂಪಿಸಿರುವ ಧನುರ್ಧಾರಿಯಾದ ಶ್ರೀ ಉದ್ಧಾನ ವೀರಭದ್ರಸ್ವಾಮಿಯ ವಿಗ್ರಹವಿದೆ. ಶ್ರೀ ವೀರಭದ್ರಮೂರ್ತಿ ಹನ್ನೆರಡು ಅಡಿ ಎತ್ತರವುಳ್ಳದ್ದಾಗಿದೆ. ಎಡಭಾಗದಲ್ಲಿ ದಕ್ಷಬ್ರಹ್ಮ ವಿಗ್ರಹವೂ ಬಲ

ಭಾಗದಲ್ಲಿ ಭದ್ರ ಕಾಳಿಕಾದೇವಿ ವಿಗ್ರಹವೂ ಕೆತ್ತಲ್ಪಟ್ಟಿವೆ. ಈ ವಿಗ್ರಹವು ಬಹಳ ಎತ್ತರವಾಗಿರುವುದರಿಂದ ಇದನ್ನು ಉದ್ದಾನೆಯ್ಯನ ಬೆಟ್ಟವೆಂದು ಕರೆಯುವ ರೂಢಿಇದೆ. ಉದ್ದಾನ ಎಂಬುವ ಶಬ್ದ ಸಂಸ್ಕೃತಕ್ಕೂ ಹೊಂದುತ್ತದೆ. 'ಉದ್ದ' ಎಂದರೆ ವೀರಭದ್ರ ಪ್ರತಿಮೆಯು ಅತ್ಯಂತ ಎತ್ತರವಿರುವುದರಿಂದ ಆತನನ್ನು ಕನ್ನಡದಲ್ಲಿ ಉದ್ದಾನ ವೀರ ಭದ್ರನೆಂದು ಕರೆಯುತ್ತಾರೆ. ಸಂಸ್ಕೃತದಲ್ಲಿಯಾದರೋ ಉತ್–ದಾನ (ಉತ್-ಶ್ರೇಷ್ಠ ದಾನ-ವಿತರಣ) ಎಂಬ ಅರ್ಥದಲ್ಲಿ ಆತನನ್ನು ಉದ್ದಾನ ವೀರಭದ್ರನೆಂದು ಕರೆಯ ಬಹುದು.

ಎಲ್ಲಾ ದಾನಗಳಲ್ಲಿ ಜ್ಞಾನದಾನವು ಶ್ರೇಷ್ಠವಾದುದರಿಂದ ಜ್ಞಾನಗಳಲ್ಲಿ ವೇದಾಂತ ವಾಕ್ಯ ಜನ್ಯವಾದ ಆಗಮಕ್ರಿಯಾ ಪೂರ್ಣವಾದ ಲಿಂಗಾಂಗ ಸಾಮರಸ್ಯ ಜ್ಞಾನವು ಶ್ರೇಷ್ಠವಾದ್ದರಿಂದ ಅಂಥ ಜ್ಞಾನದಾನವನ್ನು ಶ್ರೀ ವೀರಭದ್ರನು ತನ್ನನ್ನಾಶ್ರ ಯಿಸಿ ಬಂದ ಭಕ್ತರಿಗೆ ಅನುಗ್ರಹಿಸುವನಾದ್ದರಿಂದ ಆತನು ಉದ್ದಾನ ವೀರಭದ್ರನೆಂದು ಪ್ರಸಿದ್ಧನಾಗಿದ್ದಾನೆ.

ಈ ದೇವಾಲಯದ ಮುಂಭಾಗದಲ್ಲಿ ಧ್ವಜಸ್ತಂಭವಿದೆ. ದೇವಸ್ಥಾನವನ್ನು ಕಟ್ಟಿ ದವನು ಹಂಪಣ್ಣನೆಂದು ಈ ಕಂಭದಲ್ಲಿ ಕೆತ್ತಲ್ಪಟ್ಟಿದೆ. ಉದ್ದಾನ ವೀರಭದ್ರಸ್ವಾಮಿಯ ಬಲಭಾಗದ ಬಂಡೆಯಮೇಲೆ ಸುಂದರವಾದ 'ಶಿಖರಬಸವೇಶ್ವರ' ನಾಮಾಂಕಿತವಾದ ಚಿಕ್ಕದೇವಾಲಯವಿದೆ. ಉದ್ದಾನ ವೀರಭದ್ರಸ್ವಾಮಿ ದೇವಾಲಯದ ಎಡಭಾಗದಲ್ಲಿ ಅನತಿ ದೂರದಲ್ಲಿ-ಒಂದು ಬಂಡೆಯ ಮೇಲೆ ಕೋಡಿಯಪ್ಪ ಎಂಬ ಶರಣನ ಪ್ರತಿಮೆಯು ಕೆತ್ತಲ್ಪಟ್ಟಿದೆ. ಈ ಬೆಟ್ಟದ ಪಕ್ಕದಲ್ಲಿ ಹರಿಯುವ ಹಳ್ಳದ ಆಚೆ ದಡದಲ್ಲಿ ನಿಜಗಲ್ಲು ಗ್ರಾಮವಿದೆ.

ದಕ್ಷಾಧ್ವರ ಧ್ವಂಸಕ್ಕಾಗಿ ಪರಶಿವನ ರೌದ್ರಾಂಶ ಸಂಭೂತನಾದ ಶ್ರೀ ವೀರಭದ್ರ ದೇವನು ಸಾಮಾನ್ಯವಾಗಿ ಸಕಲಶೈವರಿಗೂ ವಿಶೇಷವಾಗಿ ವೀರಶೈವರಿಗೂ ಪರಮ ಪೂಜ್ಯನು. ಸ್ಕಾಂದಾದಿ ಶೈವಪುರಾಣಗಳಲ್ಲಿ ವೀರಭದ್ರನ ವಿಷಯ ವಿಸ್ತಾರವಾಗಿ ದೊರೆಯುತ್ತದೆ. ಮಹಾಕವಿ ರಾಘವಾಂಕನು ಶ್ರೀ ವೀರಭದ್ರನ ಮೇಲೆ ಬರೆದಿರುವ 'ವೀರೇಶ ಚರಿತೆ' ಕನ್ನಡದಲ್ಲಿ ಪ್ರಸಿದ್ಧವಾಗಿದೆ.

ದಕ್ಷಿಣ ದೇಶದಲ್ಲಿ ತಮಿಳುನಾಡಿನಲ್ಲಿ ಶ್ರೀಕುಮಾರಸ್ವಾಮಿಯು ಹೇಗೆ ಅಭಿ ಮಾನದೇವತೆಯೋ ಹಾಗೆ ಕನ್ನಡನಾಡು ಮತ್ತು ತೆಲುಗುನಾಡುಗಳಲ್ಲಿ ಶ್ರೀವೀರಭದ್ರ ಸ್ವಾಮಿಯು ಅಭಿಮಾನದೇವತೆ. ಆಂಧ್ರದೇಶದಲ್ಲಿಯೂ ವೀರಶೈವ ಆರಾಧ್ಯ ಬ್ರಾಹ್ಮ ಣರಿಗಂತೂ ಶ್ರೀ ವೀರಭದ್ರದೇವರು ಪರಮಾರಾಧ್ಯಮೂರ್ತಿ. ಆತನ ಪೂಜೆಯಿಲ್ಲದೆ ಅವರಲ್ಲಿ ವಿವಾಹಾದಿಗಳು ನಡೆಯುವುದೇ ಇಲ್ಲ. ಆ ವೀರಭದ್ರ ಪೂಜಾವಿಧಾನವನ್ನು



ಅವರಲ್ಲಿ 'ವೀರಭದ್ರಪೆಳ್ಳೆಮು' ಎಂದು ಕರೆಯುವ ವಾಡಿಕೆಯಿದೆ. ವೀರಭದ್ರದೇವರು ಐದು ಜನ ಗೋತ್ರಪುರುಷರಲ್ಲಿ ಒಬ್ಬನಾದುದರಿಂದ ವೀರಶೈವರಿಗಂತೂ ಪರಮಪೂಜ್ಯ. ಶ್ರೀಮಜ್ಜಗದ್ಗುರು ರೇಣುಕ ಭಗವತ್ಪಾದಾಚಾರ್ಯ ಸಿಂಹಾಸನಕ್ಕೆ ವೀರಸಿಂಹಾಸನ ವೆಂತಲೇ ಹೆಸರು ಬಂದಿದೆ. ರೇಣುಕ ಶಾಖೆಯವರಿಗೆ ವೀರಭದ್ರದೇವರೆ ಗೋತ್ರಪುರುಷ.

ಅನೇಕ ಶೈವ ಪುರಾಣಗಳ ಆಧಾರದ ಮೇಲೆ ರಚಿತವಾಗಿರುವ ಗುಬ್ಬಿ ಮಲ್ಲಣಾ ರ್ಯರ ವೀರಶೈವಾಮೃತ ಮಹಾಪುರಾಣದಲ್ಲಿ ಶ್ರೀ ವೀರಭದ್ರದೇವರು ದೇವತೆಗಳಿಗೆ ಲಿಂಗಧಾರಣೆ ಮಾಡಿದ ಗುರುವೆಂದು ಕಥಿಸಲಾಗಿದೆ, ವೀರಭದ್ರನ ವಿಗ್ರಹವು ಕಿರಾ ತಾರ್ಜುನೀಯ ಪ್ರಸಂಗವೆಂದು ನಿರ್ದೇಶಿಸಿರುವುದು ಸಮಂಜಸವಾದ ಊಹೆಯೆನ್ನ ಬಹುದು.

ನಿಜಗಲ್ಲು ಬೆಟ್ಟವನ್ನು ಸುರಗಿರಿ ಎಂದೂ ಕರೆಯುತ್ತಾರೆ. ಇದು ನೆಲಮಂಗಲ ತಾಲ್ಲೂಕಿನ ಈಶಾನ್ಯ ದಿಕ್ಕಿಗಿದೆ. ಬಹಳ ದೂರದಿಂದ ಅನೇಕ ಭಕ್ತಾದಿಗಳು ಈ ನಿಜಗಲ್ಲು ಬೆಟ್ಟಕ್ಕೆ ಬಂದು ಪೂಜೆ ಸಲ್ಲಿಸಿ ಹೋಗುತ್ತಾರೆ. ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುವುದರಲ್ಲಿ ಸ್ವಾಮಿಯ ನಂಬಿಕೆ ಗಮನಾರ್ಹವಾಗಿದೆ. ಮಂಗಳವಾರ ಸ್ವಾಮಿಗೆ ವಿಶೇಷಪೂಜೆ ನಡೆಯುತ್ತದೆ. ದೇವಾಲಯಗಳ ಅವಶ್ಯಕತೆ ಕುರಿತುಮಹಾತ್ಮ ಗಾಂಧಿಜಿಯವರು ಈ ರೀತಿ ಹೇಳಿದ್ದಾರೆ. "ಯಾವ ಧರ್ಮ ಅಥವಾ ಮತದವರಾಗಲಿ ತಮ್ಮದೇ ಆದ ಒಂದು ದೇವಮಂದಿರವನ್ನು ಸ್ಥಾಪಿಸದೆ ಇರುವುದು ನನ್ನ ಗಮನಕ್ಕೆ ಬಂದಿಲ್ಲ. ದೇವಮಂದಿರಗಳನ್ನು ಪಾಪವೆಂದಾಗಲಿ ಮೂಢನಂಬಿಕೆಯಿಂದಾಗಲಿ ನಾನು ತಿಳಿಯುವುದಿಲ್ಲ. ನಾವೆಲ್ಲರೂ ಒಟ್ಟಿಗೆ ಸೇರಿ ದೇವಮಂದಿರದಲ್ಲಿ ಪರಮೇಶ್ವರನನ್ನು ಪೂಜಿಸುವುದು ಅಗತ್ಯ."

---

## ವಿಚಾರ-ವೀಚಿ

ಎಲ್ಲರ ಹೃದಯದಲ್ಲೂ ಭಗವಂತನಿದ್ದಾನೆ, ನಿಜ. ಆದರೆ ವ್ಯಾಕುಲತೆಯಿಂದ ಪ್ರಾರ್ಥಿಸಿದರೆ ಆತನು ಓಗೊಡುತ್ತಾನೆ, ತಾಯಿಗೆ ಮಕ್ಕಳ ಮೇಲಿರುವ ಆಕರ್ಷಣೆ, ಪತಿವ್ರತೆಗೆ ಪತಿಯ ಮೇಲಿರುವ ಆಕರ್ಷಣೆ, ಪ್ರಾಪಂಚಿಕನಿಗೆ ಪ್ರಪಂಚದ ಆಕರ್ಷಣೆ ಇವು ಮೂರನ್ನೂ ಏಕೀಕರಿಸಿ ಭಗವಂತನ ಕಡೆಗೆ ತಿರುಗಿಸುವುದಾದರೆ, ಆಗ ಆತನ ದರ್ಶನ ದೊರೆತುಬಿಡುತ್ತದೆ.

—ಶ್ರೀ ರಾಮಕೃಷ್ಣ ಪರಮಹಂಸರು

# ಪ್ರಚಂಡ ಸಾಹಸಿ ಹೊರೇಷಿಯಸ್

—ಕ್ಯಾಪ್ಟನ್. ಎಂ. ಜಿ. ಕೆ. ಮೂರ್ತಿ.

ಪ್ರಾಚೀನ ಕಾಲದಲ್ಲಿ ರೋಮ್ ದೇಶದಲ್ಲಿ ಪ್ರಖ್ಯಾತ ಧೀರರಿದ್ದರು. ಹೊರೇಷಿಯಸ್ ಎಂಬುವನು ಮಹಾ ಸಾಹಸಿ ಧೈರ್ಯಶಾಲಿಯಾಗಿದ್ದ. ರೋಂ ದೇಶಕ್ಕೂ, ನೆರೆರಾಷ್ಟ್ರವಾದ ಟಸ್ಕನಿಗೂ ಶತ್ರುತ್ವ, ಬದ್ಧ, ದ್ವೇಷ. ಟಸ್ಕನಿಯ ರಾಜ ಲಾರ್ಸ್ ಪೊರಸೇನನು ರೋಮ್ ದೇಶದ ಮೇಲೆ ದಾಳಿ ಮಾಡಿ ಅದನ್ನು ಆಕ್ರಮಿಸಲಿಚ್ಛಿಸಿದ. ಅದಕ್ಕಾಗಿ ಶಸ್ತ್ರಾಸ್ತ್ರಗಳನ್ನು ಶೇಖರಿಸಿ ಸೈನ್ಯವನ್ನು ಏರ್ಪಡಿಸಿ ದಾಳಿಗೆ ತಯಾರಾದ. ಇದನ್ನು ರೋಮನ್ನರು ಗೂಢಚಾರರಿಂದ ಅರಿತುಕೊಂಡರು. ಅವರೂ ತಕ್ಕ ಏರ್ಪಾಟುಗಳನ್ನು ಮಾಡಿಕೊಂಡರು.

ರೋಮ್ ನಗರದ ಸುತ್ತಲೂ ಬಹು ಆಳ, ವೇಗದ ಟೈಬರ್ ನದಿ ಹರಿಯುತ್ತದೆ. ಅದಕ್ಕಿದ್ದ ಒಂದು ಸೇತುವೆ ವಿನಾ ಹೊರ ಹೋಗಲು, ಒಳಗೆ ಬರಲು ಬೇರೆ ಯಾವ ಮಾರ್ಗವಿರಲಿಲ್ಲ. ಒಂದು ದಿನ ಶತ್ರುಗಳು ಸೇತುವೆಯನ್ನು ಸಮೀಪಿಸುತ್ತ ಒಳನುಗ್ಗಿ ನಗರಕ್ಕೆ ಮುತ್ತಿಗೆ ಹಾಕುವುದರಲ್ಲಿದ್ದರು. ಸೇತುವೆಯನ್ನು ಉರುಳಿಸಿ ಶತ್ರುಸೈನ್ಯ ಒಳಗೆ ಬಾರದಂತೆ ಮಾಡಲು ರೋಮನರು ಇಚ್ಛಿಸಿದರು. ಶತ್ರುಗಳು ಸೇತುವೆಯ ಸಮೀಪಕ್ಕೆ ಬಂದಿದ್ದರಿಂದ ಅದನ್ನು ಕೆಡುವುದಕ್ಕೆ ಮುಂಚೆಯೇ ಅವರು ಸೇತುವೆಯನ್ನು ದಾಟಿದರೆ ಪ್ರಮಾದವಾಗುತ್ತಿತ್ತು. ರೋಮನರು ಪರಿತರಿತಪಿಸುತ್ತಿದ್ದರು. ಆಗ ರೋಮನರಲ್ಲೊಬ್ಬ ಕೂಗಿಕೊಂಡ. "ಧೃತಿಗೆಡಬೇಡಿ, ಪ್ರಾಣತ್ಯಾಗಕ್ಕೆ ನಾವು ಸಿದ್ಧರಿರಬೇಕು. ನಾನು ಮತ್ತಿಬ್ಬರೊಡನೆ ಸೇತುವೆಯ ಆ ತುದಿಗೆ ಓಡಿ ಅಲ್ಲಿ ಶತ್ರುಗಳನ್ನು ತಡೆಯುತ್ತೇನೆ. ಆ ತುದಿ ಬಹು ಇಕ್ಕಟ್ಟು. ಹೆಚ್ಚು ಜನರು ನುಗ್ಗಲಾಗುವುದಿಲ್ಲ. ನೀವು ಸೇತುವೆಯನ್ನು ಕೆಡವಿ." ಅವನು ಇಬ್ಬರನ್ನು ಆಯ್ದು ಸೇತುವೆಯ ತುದಿಗೆ ಓಡಿಹೋದ. ಸೇತುವೆಯನ್ನು ಇತರರು ಉರುಳಿಸುತ್ತಿದ್ದರು.

ಟಸ್ಕನ್ನರು ಮೂರೇ ಸೈನಿಕರನ್ನು ಗೇಲಿ ಮಾಡಿ ಇವರೊಡನೆ ಹೋರಾಡಲು ಮೂವರು ಬಲಿಷ್ಠ ಸೈನಿಕರನ್ನು ಕಳಿಸಿದರು. ಈ ಮೂವರು ರೋಮನ್ನರು ಆ ಮೂರು ಶತ್ರುಗಳನ್ನು ಕೊಂದು ನದಿಗೆ ಎಸೆದರು. ನಂತರ ಬಂದ ಮೂರು ಸೈನಿಕರಿಗೂ ಇದೇ ಪರಿಣಾಮವಾಯಿತು.

ಶತ್ರುಗಳು ದಿಗ್ಭ್ರಮೆಗೊಂಡು ಬಹು ಶೂರನಾಗಿದ್ದ ಆಸ್ತರ್ ಎಂಬ ಯೋಧ



ನನ್ನು ಕಳಿಸಿದರು. ಅವನಿಗೆ ಒಂದೇ ಸಲಕ್ಕೆ ಏಳೆಂಟು ಮಂದಿಯನ್ನು ಕೊಲ್ಲುವ ಸಾಮರ್ಥ್ಯವಿತ್ತು. ಅವನು ಕತ್ತಿಯನ್ನು ತೂರುತ್ತಾ ಹೊರೇಷಿಯಸ್‌ನ ತಲೆಗೆ ಗುರಿ ಇಟ್ಟು ಹೊಡೆದ. ಹೊರೇಷಿಯಸ್ ಅದನ್ನು ತಪ್ಪಿಸಿಕೊಂಡ. ಏಟು ಕಾಲಿಗೆ ಬಿತ್ತು. ದೊಡ್ಡ ಗಾಯವಾಗಿ ರಕ್ತ ಸುರಿಯತೊಡಗಿತು. ತಕ್ಷಣವೇ ಹೊರೇಷಿಯಸ್ ಆಸ್ತರ್‌ನನ್ನು ಕತ್ತಿಯಿಂದ ಹೊಡೆದು ಹಾಕಿದ. ಆಸ್ತರ್ ಸತ್ತುಬಿದ್ದ. "ಧೈರ್ಯವಿದ್ದರೆ ಇನ್ಯಾರಾದರೂ ಬನ್ನಿ" ಎಂದು ಕೂಗಿದ. ಯಾರಿಗೂ ಧೈರ್ಯ ಬರಲಿಲ್ಲ. ಸೇತುವೆ ಮುರಿದು ಬೀಳುವ ಕಾರ್ಯ ಮುಗಿಯುತ್ತಾ ಬಂದಿತ್ತು. "ಹಿಂದಕ್ಕೆ ಬನ್ನಿ ಎಂದು ರೋಮನ್ನರು ಕೂಗುತ್ತಿದ್ದರು. ಹೊರೇಷಿಯಸ್ ಇಬ್ಬರನ್ನೂ ಹಿಂದಕ್ಕೆ ಕಳುಹಿದ. ಅವರು ಸೇತುವೆಯನ್ನು ದಾಟಿ ರೋಮ್ ನಗರದ ಗಡಿ ಸೇರಿದರು. ಅವನು ಆ ತುದಿಯಲ್ಲೇ ಬಿಚ್ಚುಗತ್ತಿಯೊಡನೆ ನಿಂತುಕೊಂಡಿದ್ದ. ಹಿಂತಿರುಗಿ ಹೋಗುವಷ್ಟರಲ್ಲೇ ಸೇತುವೆ ಆರ್ಭಟಿಸುತ್ತಾ ಕುಸಿದು ಬಿತ್ತು. ಟಸ್ಕನ್ ಸೈನ್ಯಕ್ಕೆ ಸೇತುವೆಯ ಮೇಲೆ ನುಗ್ಗಿಹೋಗಿ ರೋಂ ಪಟ್ಟಣವನ್ನು ಸೇರಲು ಅಸಾಧ್ಯವಾಗಿ ಆಶಾಭಂಗವಾಯಿತು.

ಹೊರೇಷಿಯಸ್‌ನ ಎದುರಿಗೆ ಅಸಂಖ್ಯಾತ ಸೈನಿಕರು ಘರ್ಜಿಸುತ್ತಾ ಶಸ್ತ್ರಾಸ್ತ್ರಗಳೊಡನೆ ನೆರೆದಿದ್ದರು. ಹಿಂದೆ ಭೋರ್ಗರೆವ ಟೈಬರ್ ನದಿ ಧೃತಿಗೆಡದೆ ತಾನೊಬ್ಬನೇ ಕತ್ತಿ ಹಿಡಿದು ನಿಂತಿದ್ದ. ಅದೆಂಥ ಸಾಹಸ, ಧೈರ್ಯ! ಮೊದಲು ರೋಮಿನ ಪ್ರಜೆಯಾಗಿದ್ದು ಶತ್ರು ಸೈನ್ಯದಲ್ಲಿರುವುದನ್ನು ನೋಡಿ ಹೊರೇಷಿಯಸ್ ರೋಷದಿಂದ ಅವನನ್ನು ಹೀಯಾಳಿಸಿ ಬಹು ತರವಾಗಿ ನಿಂದಿಸಿದ. ಟೆಕ್ಸ್‌ಟನ್‌ನ ಮುಖ ಕೆಂಪೇರಿ, ಹೊರೇಷಿಯಸ್‌ನನ್ನು ಹಿಡಿದು ಕೊಲ್ಲುವಂತೆ ಸೇನಿಕರಿಗೆ ಕೂಗಿಕೊಂಡ. ಶತ್ರು ರಾಜ ಹೊರೇಷಿಯಸ್ ಮೌನವಾಗಿದ್ದ. ಹಿಂದಕ್ಕೆ ತಿರುಗಿ ಅಜೇಯನಂತೆ ಟೈಬರ್ ನದಿಗೆ ಹಾರಿದ. ಶತ್ರು ಸೈನ್ಯಕ್ಕೆ ದಿಕ್ಕು ತೋಚದಂತಾಯಿತು. ರೋಮನ್ನರಿಗೆ ಮಹದಾನಂದವಾಯಿತು. ಕಾಲಿಗೆ ಬಹು ನೋವಾಗಿ, ರಕ್ತ ಸುರಿಯುತ್ತಿದ್ದು. ವಿಪರೀತ ನಿತ್ರಾಣವಾಗಿದ್ದರೂ ಹೊರೇಷಿಯಸ್ ಅಪರಿಮಿತ ಸಾಹಸದಿಂದ ಈಜಿಕೊಂಡು ವಿಜಯ ವೀರನಂತೆ ರೋಮ್ ಪಟ್ಟಣವನ್ನು ಸೇರಿದ. ರೋಮನರು ಹರ್ಷೋದ್ಗಾರ ಮಾಡುತ್ತಾ ಜಯ ಜಯ ಘೋಷಣೆಯಿಂದ ವಿಜೃಂಭಣೆಯ ಮೆರವಣಿಗೆಯುಲ್ಲಿ ಅವನನ್ನು ನಗರಕ್ಕೆ ಕರೆದೊಯ್ದರು. ಶತ್ರು ಸೈನ್ಯ ಆಶಾಭಂಗದಿಂದ ಹಿಂದಿರುಗಿತು. ಹೊರೇಷಿಯಸ್‌ನ ಸಾಹಸ, ದೇಶಪ್ರೇಮ, ಘನತೆ ಇತಿಹಾಸ ಪ್ರಸಿದ್ಧವಾಗಿವೆ. ●

## ವಿಚಾರ–ವೀಚಿ

ಈ ಪ್ರಪಂಚದಲ್ಲಿ ಶಾಂತಿಸ್ಥಾಪನೆ ಅಹಿಂಸೆಯೊಂದರಿಂದಲೇ ಸಾಧ್ಯ ಎಂದು ಘಂಟಾಘೋಷವಾಗಿ ಹೇಳುತ್ತೇನೆ.

**ಮ. ಗಾಂಧೀಜಿ**

# ಜಗದ್ಗುರುವಿಗೆ

[ಜಗದ್ಗುರು ಡಾ॥ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರನ್ನ ಕುರಿತು ಭಕ್ತಿಪೂರ್ವಕವಾಗಿ ರಚಿಸಿದ ನಮನ]

ವ್ಯೋಮಾಕಾಶದಷ್ಟು ಬಿತ್ತರದ ವೃಕ್ಷವಾಗಿ ಬೆಳೆದೆ;
ಬೆಂದು ನೊಂದಿಹ ಜೀವಿಗಳಿಗೆ ನೆರಳಾಗಿ ನಿಂತೆ;
ಬೇಡುತಿಹ ಕೈಗಳಿಗೆ ಕಲ್ಪತರುವಾದೆ;
ದೀನದಲಿತರಿಗೆಲ್ಲ ಗತಿಮತಿಯು ನೀನಾದೆ;
ಕಾಮಕ್ರೋಧವ ಜಯಿಸಿ ವೈರಾಗ್ಯ ಶಿಖರವೇರಿ;
ಸುಖದುಃಖಗಳೆನ್ನೆಲ್ಲ ನಗುತ ಸ್ವೀಕರಿಸಿ;
ಗೌರೀಶಂಕರದೌನ್ನತ್ಯವನು ಪಡೆದು;
ಜಗದ ಗುರುವಾದೆ; ಮದ ಮತ್ಸರಗಳ ತುಳಿದು;
ಅಂಹಕಾರ ಮಮಕಾರಗಳನಳಿದು;
ಪಂಚೇಂದ್ರಿಯಗಳ ಜಯಿಸಿ ಪರಶಿವನು ನೀನಾದೆ;
ತ್ರಿಮಲಕ್ಕೆ ದೂರಾಗಿ ಜಗವ ರಕ್ಷಿಪಯೋಗಿ;
ವರ್ಣಿಯಾಗಿ ವರ್ಷಿಷ್ಟನೆನಿಸಿದೆ;
ನೀನಗಮ್ಯನಪ್ರತಿಮನಪ್ರಮೇಯನು ಗುರುವೆ;
ಶರಣೆನ್ನುತಿಹೆವಿಂದು ನಿನ್ನಾರಕೆಯಿರಲೆಮಗೆ.

---

### ವಿಚಾರ–ವೀಚಿ

ಅನ್ನವ ನೀಡುವುದನು ಸಿದ್ಧಗಂಗೆಯಲಿ ನೋಡಿ
ಸಂತಸ ಪಡಬೇಕಯ್ಯಾ !
ವಿದ್ಯೆಯ ನೀಡುವುದನು ಸಿದ್ಧಗಂಗೆಯಲಿ ಕಂಡು
ಜೀವನ ಮಾರ್ಗ ರೂಪಿಸಿಕೊಳ್ಳಬೇಕಯ್ಯಾ !
ಭಕ್ತಿ ಸಂಪದವನು ಸಿದ್ಧಗಂಗೆಯಲಿ ಕಂಡು
ಕಲಿಯಬೇಕಯ್ಯಾ ॥
ಸರ್ವ ಧರ್ಮ ಸಮನ್ವಯವನು ಸಿದ್ಧಗಂಗೆಯಲಿ ತಿಳಿದು
ನಲಿಯಬೇಕಯ್ಯಾ ,
ಭುವಿಲಸದ್ಯಡೆಯೂರು ಪುರಾಧಿಪಂ
ಜಗದ್ಗುರು ಶ್ರೀ ತೋಂಟದ ಗುರುಸಿದ್ಧಲಿಂಗೇಶ್ವರಾ !!

ಸಿದ್ಧಗಂಗಾ



# ನಮೋ

ಅಗಣಿತ ಮಹಿಮನೆ ಅಪ್ರಮೇಯನೆ;
ಅಘಪರಿಹಾರಕ ಶ್ರೀಗುರು ॥
ಆನಂದದಾಯಕ ಅನಂತ ವ್ಯಾಪಕ;
ಆತ್ಮ ಸ್ವರೂಪನೆ ಶ್ರೀಗುರು ॥
ಇಂಗಿತಜ್ಞನೆ ಆತ್ಮ ಬಂಧುವೆ;
ಈಶ ಮಹೇಶನೆ ಶ್ರೀಗುರು ॥
ಉಪಮಾತೀತನೆ ದೀನರರಕ್ಷಕ;
ಊರ್ಧ್ವಾತೀತನೆ ಶ್ರೀಗುರು ॥
ಋಷಿ ಜನ ಸೇವಿತ ವಂದಿತ ಚರಣ;
ೠಕಾರಾತ್ಮನೆ ಶ್ರೀಗುರು ॥
ಎಲ್ಲರ ಪೊರೆಯುವ ದೀನಬಂಧುವೆ;
ಏಣಾದಿ ನಾಯಕ ಶ್ರೀಗುರು ॥
ಐಕಾಗ್ರ್ಯಚಿತ್ತನೆ ಐಂದ್ರಿಯ ರಹಿತನೆ;
ಒಲುಮೆಯಿಂ ಸಲಹು ಶ್ರೀಗುರು ॥
ಓಂಕಾರ ರೂಪನೆ ಓಜವರ್ಯನೆ;
ಔದ್ಧತ್ಯನಾಶಕ ಶ್ರೀಗುರು ॥
ದುಷ್ಟ ಶಿಕ್ಷಕ ಶಿಷ್ಟರ ರಕ್ಷಕ;
ಜಗವನೆ ಪೊರೆವ ಶ್ರೀಗುರು ॥
ನಮೋ ನಮೋ ಶ್ರೀ ಶಿವಕುಮಾರರಿಗೆ ॥
ನಮೋ ನಮೋ ಶ್ರೀ ಗುರುವೇ ನಮೋ
ನಮೋ ನಮೋ ಜಗದ್ಗುರುವೆ ನಮೋ ॥ —

—ಎಂ. ಎ. ನೀಲಾಂಬಿಕಾ, ಮೈಸೂರು.

# ಆಧುನಿಕ ಕೃಷಿಯಲ್ಲಿ ಸಸ್ಯ ಸಂರಕ್ಷಣೆಯ ಪಾತ್ರ

—ಡಿ. ವೆಂಕಟರಾವ್, ಎಂ.ಎ.
ಹಾಸನ

ಕೃಷಿ ವಿಜ್ಞಾನದಲ್ಲಿ ಸಸ್ಯ ಸಂತಕ್ಷಣೆ ಬಹು ಮುಖ್ಯ. ಇದು ಉತ್ಪನ್ನದಲ್ಲಾಗುವ ನಷ್ಟವನ್ನು ಉಳಿಸುವ ಸಾಧನ. ಸಸ್ಯ ಸಂರಕ್ಷಣೆ ಪಿಹಿಕಸ:ಖದ ಆಧಾರ, ಮಾತ್ರವಲ್ಲ, ಜೀವನದ ಪರಿಷ್ಕೃತ ಅಂಶಗಳಿಗೂ ಅದರ ಸಂಬಂಧ ವಿಶಿಷ್ಟವಾದುದು. ಶ್ರೀಮಂತ ಮತ್ತು ಬಡ ರಾಷ್ಟ್ರಗಳೆರಡೂ ವಿಭಿನ್ನವಾದರೂ ಏಕರೀತಿಯಲ್ಲಿ ಸಸ್ಯ ಸಂರಕ್ಷಣೆಯ ಹಾಗೂ ಪರಿಸರಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಎದುರಿಸುತ್ತಿವೆ. ಸಸ್ಯ ಸಂರಕ್ಷಣೆ ಎಂದರೆ ಅಧಿಕ ಇಳುವರಿ ಕೊಡುವ ಮತ್ತು ಇತರ ಬೆಳೆಗಳನ್ನು ರಕ್ಷಿಸುವುದು. ಕೃಷಿ ಕ್ರಮಗಳಲ್ಲಿ ಇದು ಮುಖ್ಯವಾದ ಒಂದು ಅಂಗವಾಗಿದೆ

ಯಾವ ಜೀವಂತ ವಸ್ತುವನ್ನಾದರೂ ಬಲಿಷ್ಠವಾಗಿ ಬೆಳೆಸಬೇಕಾದರೆ ಅದನ್ನು ಲಾಲಿಸಿ ಬೆಳಸಬೇಕು. ಹಾಗೆಯೇ ಬೆಳೆಗಳನ್ನು ಲಾಲಿಸಿ ಪಾಲಿಸಬೇಕು. ಲಾಲಿಸುವುದೆಂದರೆ, ಬೆಳೆಯು ಚೆನ್ನಾಗಿ ಹುಲುಸಾಗಿ ಬೆಳೆಯಲು ಅನುಕೂಲವಾಗುವಂತೆ ಭೂಮಿಯನ್ನು ಹದಮಾಡುವುದು, ಅದಕ್ಕೆ ಬೇಕಾದ ಆಹಾರ ರೂಪದ ಗೊಬ್ಬರವನ್ನು ನಿರ್ದಿಷ್ಟ ಪ್ರಮಾಣದಲ್ಲಿ ಅವುಗಳಿಗೆ ಒದಗಿಸುವುದು. ಪಾಲಿಸುವುದೆಂದರೆ, ಬೆಳೆಗಳಿಗೆ ತಗಲುವ ರೋಗರುಜಿನಗಳಿಂದ ಮತ್ತು ಬೆಳೆ ನಾಶಪಡಿಸುವ ಕ್ರಿಮಿಕೀಟಗಳು, ಕಳೆಗಳ ಬಾಧೆಯನ್ನು ತಡೆಗಟ್ಟುವುದು. ಇವೆರಡೂ ಸಸ್ಯ ಸಂರಕ್ಷಣೆಯ ನಿರ್ದಿಷ್ಟ ಭಾಗಗಳಾಗಿವೆ. ಬೆಳೆಯನ್ನು ಕೇವಲ ಲಾಲಿಸಿದರೆ ಸಾಲದು, ಪಾಲಿಸುವುದು ಅತಿಮುಖ್ಯ.

ಸಸ್ಯ ಸಂರಕ್ಷಣೆಯು ಅನುಸರಿಸಲೇ ಬೇಕಾದ ಒಂದು ಮುಖ್ಯ ಅಂಗವೆಂಬುದು ನಮ್ಮ ಪೂರ್ವಿಕರಿಗೂ ತಿಳಿದಿತ್ತು. ಸಸ್ಯ ಸಂರಕ್ಷಣೆಯ ಬಗೆಗಿನ ಅವರ ದೃಷ್ಟಿ ಇಂದಿನ ದೃಷ್ಟಿಯಿಂದ ನಗೆಪಾಟಲಾಗಬಹುದಾದರೂ ಮಾರಕ ಶತ್ರುಗಳಾದ ಕೀಟ ಹಾಗೂ ರೋಗಗಳ ಬಗ್ಗೆ ಅವರಿಸಿದ್ದ ಅರಿವನ್ನು ಅಲ್ಲಗಳೆಯಲಾಗದು. ಸಸ್ಯ ಸಂರಕ್ಷಣೆಯು ಬೇಸಾಯವು ಎಷ್ಟು ಪ್ರಾಚೀನವಾದುದೋ, ಪ್ರಕೃತಿಯಲ್ಲಿ ಅಷ್ಟೇ ಪ್ರಾಚೀನ. ಪ್ರಕೃತಿಯಲ್ಲಿ ಸೃಷ್ಟಿಸಲಾಗಿರುವ ಹಲವೇ ವಿಧವಾದ ಪರೋಪಕಾರಿ ಜೀಪಿಗಳು ಬೆಳೆಗಳಿಗೆ ಉಪದ್ರವಕೊಡುವ ಕೀಟಗಳನ್ನು ಹತೋಟಿಯಲ್ಲಿಟ್ಟಿರುವುದು ಒಂದು ಸ್ವಾಭಾವಿಕ ಲಕ್ಷಣವಾಗಿದೆ. ಆದರೆ ಪರೋಪಕಾರಿ ಜೀವಿಗಳ ಪ್ರಭಾವವು ರೈತರ ಅನುಕೂಲಕ್ಕೆ ಹೆಚ್ಚಾಗಿ ಕಂಡುಬಂದಿಲ್ಲ. ಇದಕ್ಕೆ ಕಾರಣ ಪ್ರಕೃತಿಯಲ್ಲಿರುವ ನೈಜಕೀಟ ಮತ್ತು



ಪರೋಪಕಾರಿ ಜೀವಿಗಳ ನಿಕಟ ಸಂಬಂಧದಲ್ಲಿ ಏರುಪೇರುಂಟಾಗಿರುವುದು. ಪ್ರಕೃತಿಯಲ್ಲಿ ಪರಾವಲಂಬನೆಯ ಪರೋಪಕಾರಿ ಜೀವಿಗಳು ಎಷ್ಟೋ ಇವೆ, ಆದರೆ ಇವುಗಳಲ್ಲಿ ಮಾನವನಿಗೆ ಉಪಯುಕ್ತವಾದವುಗಳು ಬಹುವಿರಳ. ಪ್ರಕೃತಿ ಒದಗಿಸಿರುವ ಇಂಥಹ ರಕ್ಷಣಾಕ್ರಮ ಮನುಷ್ಯನಿಗೆ ಉಪಯೋಗವಾಗಬೇಕಾದರೆ, ದೀರ್ಘಕಾಲ ಬೇಕಾಗುತ್ತದೆ. ಅಲ್ಲದೆ ನೈಜ ವಾತಾವರಣಗಳು ಪರೋಪಕಾರಿ ಜೀವಿಗಳ ಬೆಳವಣಿಗೆಗೆ ಸದಾ ಅನುಕೂಲವಾಗಿರಬೇಕಾಗುತ್ತದೆ. ಮನುಷ್ಯ ಎಷ್ಟೇ ತಾಳ್ಮೆಯಿಂದ ಇದ್ದರೂ ಈ ಪ್ರಸ್ತುತ ಆಹಾರದ ಕೊರತೆಯ ಪರಿಸ್ಥಿತಿಯಲ್ಲಿ ಕಾಲವಿಳಂಬಕ್ಕೆ ಅವಕಾಶ ಕೊಡುವುದು ಸಾಧ್ಯವಿಲ್ಲ. ಆದ್ದರಿಂದ ಸ್ವಾಭಾವಿಕವಾಗಿ ಸಸ್ಯ ಸಂರಕ್ಷಣೆಗೆ ಈ ಪರೋಪಕಾರಿ ಜೀವಿಗಳಿಂದ ಎಷ್ಟು ಅನುಕೂಲ ಸಿಗುವುದೋ ಅಷ್ಟಕ್ಕೆ ತೃಪ್ತಿ ಹೊಂದಬೇಕಾಗಿದೆ. ಪರೋಪಕಾರಿ ಜೀವಿಗಳನ್ನು ಉತ್ಪತ್ತಿಮಾಡುವ ವಿಧಾನವನ್ನು ಪರಿಣಾಮಗೊಳಿಸಿದರೆ ಸಸ್ಯ ಸಂರಕ್ಷಣೆ ಬೇರೆ ವಿಧಾನಗಳಿಗಿಂತ ಕಡಿಮೆ ಖರ್ಚಿನಲ್ಲಿ ಯಾವ ಅಪಾಯವೂ ಇಲ್ಲದೆ ನಡೆಯುತ್ತದೆ. ಭೂಮಿಯಲ್ಲೇ ಹರಡಿ ಬೆಳೆಯುವ ಪಾಪಸ್‌ಕಳ್ಳಿ ಮುಂತಾದವನ್ನು ಕ್ರಿಮಿನಾಶಕಗಳಿಂದ ತಡೆಗಟ್ಟಲು ಸದ್ಯದಲ್ಲಿ ಇರುವ ಅನುಕೂಗಳಿಂದ ಸಾಧ್ಯವಾಗಿಲ್ಲ. ಇದಕ್ಕೆ ಪರಾವಲಂಬಿ ಜೀವಿಗಳ ಬಳಕೆಯ ಅಗತ್ಯವಿದೆ. ಪರಾವಲಂಬಿ ಜೀವಿಗಳನ್ನು ಸಸ್ಯ ಸಂರಕ್ಷಣೆಗೆ, ಕಳೆನಾಶಕಕ್ಕೆ ಹೆಚ್ಚು ಹೆಚ್ಚಾಗಿ ಬಳಸುವ ದೃಷ್ಟಿಯಿಂದ 'ಕಾಮನ್‌ವೆಲ್ತ್ ಇನ್‌ಸ್ಟಿಟ್ಯೂಟ್ ಆಫ್ ಬಯಲಾಜಿಕಲ್ ಕಂಟ್ರೋಲ್' ಎಂಬ ಸಂಸ್ಥೆಗಳು ವಿಶ್ವದ ನಾನಾ ಭಾಗಗಳಲ್ಲಿ ದೊರೆಯುವ ಪರೋಪಕಾರಿ ಜೀವಿಗಳನ್ನು ಹುಡುಕಿ, ಸಾಕಿ ಬೇರೆ ಬೇರೆ ದೇಶಗಳಿಗೆ ಕಳಿಸುವುದಕ್ಕೆ ಸಹಾಯವಾಗುತ್ತಿವೆ.

ಮನುಷ್ಯ ತನ್ನ ಉಪಯೋಗಕ್ಕಾಗಿ ಸಕಾಲದಲ್ಲಲ್ಲದೆ ಅಕಾಲದಲ್ಲೂ ಬೆಳೆಗಳನ್ನು ಬೆಳೆಯುವುದು ಪ್ರಕೃತಿಗೆ ವ್ಯತಿರಿಕ್ತ. ಇದರಿಂದ ಬೆಳೆಗಳಿಗೆ ಬೀಳುವ ಕೀಟಗಳ ಬೆಳವಣಿಗೆಗೆ ಮತ್ತು ಅವುಗಳ ಸಂತಾನ ಉತ್ಪತ್ತಿಗೆ ಅನುಕೂಲವಾದ ವಾತಾವರಣವನ್ನು ಕಲ್ಪಿಸಿಕೊಟ್ಟಂತಾಗಿದೆ. ಇದರಿಂದಾಗಿಯೇ ಕೀಟಗಳ ಉಪದ್ರವ ಬೆಳೆಗಳಿಗೆ ಅಧಿಕವಾಗಿದೆ. ಪ್ರಕೃತಿಯಲ್ಲಿ ಹೆಚ್ಚು ಇಳುವರಿ ಕೊಡುವಂತಹ ತಳಿಗಳು ಅಲ್ಲಲ್ಲಿ ಉತ್ಪನ್ನವಾಗುತ್ತಲೇ ಇರುತ್ತವೆ. ಆದರೂ ಎಲ್ಲೋ ಸಾವಿರಕ್ಕೆ ಅಥವಾ ನೂರಾರು ವರ್ಷಗಳಿಗೊಮ್ಮೆ ಇಂತಹ ತಳಿಯನ್ನು ಪ್ರಕೃತಿಯಲ್ಲಿ ಕಾಣಬಹುದು. ಇದಕ್ಕೆ ಕಾರಣ ಹೈಬ್ರಿಡ್ ತಳಿಗಳು ರೋಗ ಮತ್ತು ಕೀಟಬಾಧೆಗಳಿಗೆ ಬಹಳ ಬೇಗ ತುತ್ತಾಗುವುದು. ಪ್ರಕೃತಿಯಲ್ಲಿ ಇವುಗಳನ್ನು ತಡೆಗಟ್ಟುವಂತಹ ಕ್ರಮಗಳು ಬಹು ಕಡಿಮೆ ಇರುವುದರಿಂದ ಹೈಬ್ರಿಡ್ ವಿಸ್ತರಿಸುವ ಮೊದಲೇ ಈ ಬಾಧೆಗಳಿಗೆ ತುತ್ತಾಗಿ ನಾಶವಾಗುತ್ತವೆ. ಇಂತಹ ಪರಿಸ್ಥಿತಿಯಲ್ಲಿ ಅಡಚಣೆಗಳನ್ನು ನಿವಾರಿಸಿಕೊಂಡು ಹೆಚ್ಚು ಇಳುವರಿ ಪಡೆಯುವುದರಲ್ಲಿ ಮನುಷ್ಯ ಉದ್ಯುಕ್ತನಾಗಿದ್ದಾನೆ. ರೋಗಾಣುಗಳು, ಕೀಟಗಳು ಕೃಷಿಯಲ್ಲಿ ಉಲ್ಬಣಾವಸ್ಥೆಯನ್ನು ತಾಳಿರುವುದರಿಂದಾಗಿಯೇ ಸಸ್ಯ ಸಂರಕ್ಷಣೆಯು ಕೃಷಿಕ್ರಮದ

ಒಂದು ಮುಖ್ಯ ಅಂಗವಾಗಿ ಪರಿಗಣಿಸಲ್ಪಟ್ಟಿದೆ. ಇಂದಿನ ದಿನಗಳಲ್ಲಂತೂ ಇದರ ಪಾತ್ರ ಅತಿ ಮಹತ್ವದ್ದಾಗಿದೆ. ಆಧುನಿಕ ಕ್ರಿಮಿನಾಶಕ ಔಷಧಿಗಳು ಮತ್ತು ಸಸ್ಯ ಸಂರಕ್ಷಣೆಯ ಪದ್ಧತಿಯಲ್ಲಿರುವ ವೈಜ್ಞಾನಿಕ ಅನುಭವ ತಕ್ಕಂತೆ ದೊರೆಯುತ್ತಿರುವುದರಿಂದಾಗಿ ಹೆಚ್ಚು ಇಳುವರಿ ಕೊಡುವ ತಳಿಗಳ ಉತ್ಪಾದನೆ ಇಂದು ಸಾಧ್ಯವಾಗಿದೆ. ಹೈಬ್ರಿಡ್ ತಳಿಗಳ ಬೆಳವಣಿಗೆಯಲ್ಲಿ ಎಲ್ಲಾ ಆಧುನಿಕ ಕ್ರಮಗಳನ್ನು ಅನುಸರಿಸಿ ಸಸ್ಯ ಸಂರಕ್ಷಣೆ ಮಾಡದಿದ್ದರೆ, ಕೆಲವು ಬಾರಿ ಇಳುವರಿ ಸ್ಥಳೀಯ ತಳಿಗಳಿಗಿಂತ ಕಡಿಮೆ ಆಗಿರುವ ನಿದರ್ಶನಗಳಿವೆ. ಆದ್ದರಿಂದ ಸಸ್ಯಸಂರಕ್ಷಣೆ ಆಧುನಿಕ ಕೃಷಿಯಲ್ಲಿ ಒಂದು ಕಡ್ಡಾಯವಾದ ನಿಯಮವಾಗಿದೆ. ಅಧಿಕ ಇಳುವರಿ ತಳಿಗಳು ಭಾರತೀಯ ಕೃಷಿಗೆ ಹೊಸರಂಗು ತಂದುಕೊಟ್ಟಿವೆ. ಕೃಷಿಕ್ಷೇತ್ರದಲ್ಲಿ ಹೊಸ ವಿಚಾರ ಪ್ರಯೋಗಗಳಿಗೆ ನಾಂದಿಯಾಗಿವೆ. ಸುಧಾರಿತ ತಳಿಗಳು ಗ್ರಾಮೀಣ ಪ್ರದೇಶದ ಆರ್ಥಿಕ ಅಭ್ಯುದಯದ ಮುಖ್ಯ ಸಾಧನವಾಗಿವೆ. ಇದರಲ್ಲಿ ಸಸ್ಯಸಂರಕ್ಷಣೆಯ ಪಾತ್ರ ಅಮೋಘ. ಕೆಲವು ಕೃಷಿ ವಿಜ್ಞಾನಿಗಳ ಅಭಿಪ್ರಾಯದಲ್ಲಿ ಸಸ್ಯಸಂರಕ್ಷಣೆಯ ನೆರವಿಲ್ಲದಿದ್ದರೆ, ಆಧುನಿಕ ಕೃಷಿ ಪದ್ಧತಿ ಈ ಮಟ್ಟಕ್ಕೆ ಬರುತ್ತಿರಲಿಲ್ಲ. ಸಸ್ಯಸಂರಕ್ಷಣೆಗೆ ಪ್ರಾಧಾನ್ಯತೆ ಕೊಟ್ಟು, ನಾಟಿಯಿಂದ ಕೊಯ್ಲಿನವರೆಗೆ ಹಲವಾರು ಹಂತಗಳಲ್ಲಿ ಸಸ್ಯ ಸಂರಕ್ಷಣೆಗೆ ಬೇಕಾಗುವ ಎಲ್ಲಾ ಕ್ರಿಮಿನಾಶಕಗಳನ್ನೂ ಬಳಸಿ, ಫಸಲನ್ನು ತೆಗೆದು, ಅದರಿಂದ ಬರುವ ಬೀಜಗಳಿಂದ ವಿಸ್ತರಣೆ ಮಾಡಲು ಅನುಕೂಲವಾದದ್ದರಿಂದಲೇ ಆಧುನಿಕ ಕೃಷಿ ಸಾಧ್ಯವಾದದ್ದು ಎಂಬ ಮಾತನ್ನು ಪ್ರತಿಯೊಬ್ಬರೂ ಒಪ್ಪಲೇಬೇಕಾಗಿದೆ. ನಮ್ಮ ದೇಶದಲ್ಲಿ ಆಹಾರ ಧಾನ್ಯಗಳ ಇಳುವರಿ ಹೆಚ್ಚುತ್ತಿದೆ. ಇದಕ್ಕೆ ಸಸ್ಯ ಸಂರಕ್ಷಣೆಯ ಅಗಾಧ ಸೇವೆಯೇ ಕಾರಣ.

ಬೆಳೆಗಳ ಮೇಲೆ ಕೀಟಗಳ ಹಾವಳಿ ಎಂದಿಗಿಂತಲೂ ಇಂದು ಹೆಚ್ಚಾಗಿ ಕಂಡುಬರುತ್ತಿದೆ. ಕೆಲವೆಡೆಗಳಲ್ಲಿ ಬೆಳೆಗಳಿಗೆ ರೋಗ ಕೀಟಗಳ ಉಪದ್ರವ ಹೆಚ್ಚಾಗಿ ಇಳುವರಿ ಇಲ್ಲದಂತೆಯೇ ಆಗಿರುವ ನಿದರ್ಶನಗಳಿವೆ. ಕೆಲವು ನಿರ್ದಿಷ್ಟ ಪ್ರದೇಶಗಳಲ್ಲಿ ವರ್ಷಂಪ್ರತಿ ಕಂಬಳಿ ಹುಳ ಮತ್ತು ಮಿಡತೆ ಹುಳುಗಳ ಹಾವಳಿ ಕಂಡುಬಂದು ಸಸ್ಯ ಸಂರಕ್ಷಣಾಕ್ರಮ ಕೈಗೊಳ್ಳದಿದ್ದರೆ ಬೆಳೆ ಪೂರ್ತಿನಾಶವಾಗಬಹುದೆಂಬ ಭೀತಿ ಅನುಮಾನಗಳು ರೈತರಲ್ಲಿ ಮತ್ತು ಸರಕಾರದಲ್ಲಿ ತಲೆದೋರಿದೆ. ಇದರಿಂದ ಸಸ್ಯ ಸಂರಕ್ಷಣೆಯ ಪಾತ್ರದ ಮಹತ್ವಕ್ಕಿಳಿಯುತ್ತದೆ. ಕೆಲವು ಸಂದರ್ಭಗಳಲ್ಲಿ ಸರಕಾರವೇ ಸಾಮೂಹಿಕವಾಗಿ ಸಸ್ಯ ಸಂರಕ್ಷಣಾಕ್ರಮಗಳನ್ನು ಬೆಳೆಯ ಮಟ್ಟದಲ್ಲಾಗಲಿ ಅಥವಾ ವಿಮಾನಗಳ ಮೂಲಕ ಮೇಲಿಂದಾಗಲೀ ಸೂಕ್ತ ರಾಸಾಯನಿಕ ವಸ್ತುಗಳ ಸಹಾಯದಿಂದ ಕೈಗೊಳ್ಳುತ್ತಿದೆ. ಇದು ಸಸ್ಯ ಸಂರಕ್ಷಣೆಗೆ ಸರಕಾರ ನೀಡಿರುವ ಪ್ರಾಧಾನ್ಯತೆಗೆ ನಿದರ್ಶನ. ಬೇಸಾಯ ಮುಂದುವರಿದಂತೆ ಸಸ್ಯ ಸಂರಕ್ಷಣಾ ಕಾರ್ಯಕ್ರಮ ಹೆಚ್ಚು ಪ್ರಾಮುಖ್ಯತೆ ತಳೆಯುವುದರಲ್ಲಿ ಸಂದೇಹವಿಲ್ಲ.



# ಯಶಸ್ಸಿಗಾಗಿ ಅಷ್ಟಸೂತ್ರಗಳು

ಡಾ॥ ಕೆ. ಜಿ. ದೇಸಾಯಿ

ಮುಂದುವರೆದ ಲೇಖನ

## ಸೂತ್ರ ಐದು

**ಈ ಐಹಿಕ ಸಮಾಜದಲ್ಲಿ ನೈಜ ಮಿತ್ರರೆಂಬುವವರೇ ಇಲ್ಲ:**

ನಾವು ಸರ್ವಸಮಾನತೆಯ ಬಗ್ಗೆ ಬೇಕಾದಷ್ಟು ಮಾತಾಡುತ್ತೇವಾದರೂ ನಮ್ಮ ಸಮಾಜ ಪ್ರಾಮುಖ್ಯವಾಗಿ ಜನರನ್ನು ಅವರವರ ಅಂತಸ್ತಿನಿಂದಲೇ ಅಳೆಯುತ್ತದೆ, ನಿಮಗೆ ನಿಮ್ಮ ಸಾಮಾಜಿಕ ಅಂತಸ್ತಿನ ಪ್ರಜ್ಞೆ ಸ್ವಲ್ಪವಾದರೂ ಇಲ್ಲದೇ ಹೋದರೆ ಈ ಸಮಾಜದಲ್ಲಿ ಬಾಳುವೆಯೇ ಅಸಹ್ಯವಾದೀತು. ನಮ್ಮ ಸಮಾಜ ವ್ಯವಸ್ಥೆ ಈಗಿರುವ ತರದಲ್ಲಿ ಇರುವವರೆಗೂ ನಿಮ್ಮ ಸ್ನೇಹಿತರನ್ನು ಆಯ್ದುಕೊಳ್ಳುವಾಗ ಹಾಗೂ ರಕ್ತಸಂಬಂಧವನ್ನು ಬೆಳೆಸುವಾಗ ನಿಮ್ಮ ಅಂತಸ್ತಿನ ಪ್ರಜ್ಞೆಯನ್ನು ಕೆಲಮಟ್ಟಿಗೆ ಉಳಿಸಿಕೊಂಡು ಮುಂದುವರಿಯಬೇಕು. ನಿಮ್ಮ ಮಿತ್ರರನ್ನು ಆಯ್ದುಕೊಳ್ಳುವಾಗ ಅವರು ಶಕ್ಯವಿದ್ದಷ್ಟು ನಿಮ್ಮ ಮನಃಪ್ರವೃತ್ತಿಗೆ ಹೊಂದಿಕೊಳ್ಳುವವರಾಗಿರುವಂತೆ ನೋಡಿಕೊಳ್ಳುವುದು ಶ್ರೇಯಸ್ಕರ. ನಮ್ಮ ದೇಶದಲ್ಲಿ ಮನುಷ್ಯನನ್ನು ಅವನ ಸಿರಿವಂತಿಕೆಯಿಂದಲೇ ಅಳೆಯುತ್ತಾರೆ. ಪ್ರಾಯಶಃ ಇತರ ದೇಶಗಳಲ್ಲಿ ಹೀಗಿರಲಿಕ್ಕಿಲ್ಲ. ಇಂದಿನ ಭಾರತೀಯ ಸಮಾಜದಲ್ಲಿ ಮಹಾ ಮೇಧಾವಿಗಳಿಗೂ ಸಿಗದಷ್ಟು ಗೌರವ ಅನೇಕಸಲ ಅಸಂಸ್ಕೃತ ಶ್ರೀಮಂತರಿಗೆ ದೊರೆಯುತ್ತಿರುವುದೊಂದು ದುರ್ದೈವದ ಸಂಗತಿಯಾದರೂ ಅದು ವಸ್ತುಸ್ಥಿತಿ.

## ಸೂತ್ರ ಆರು

**ಜನಸೇವೆಯೆಂಬುದು ಅಪಪ್ರಯೋಗ; ಅದರ ಹಿಂದಿನ ಸತ್ಯವನ್ನು ಅರಿಯಬೇಕು:**

ಇಂದು ಎಲ್ಲಿ ನೋಡಿದರೂ ಸೇವಾ ಸಂಸ್ಥೆಗಳು ಬೇಕಾದಷ್ಟು ಕಣ್ಣಿಗೆ ಬೀಳುತ್ತವೆ. ಕೆಲವಂತೂ ಅಂತರ್‌ರಾಷ್ಟ್ರೀಯ ಸಂಸ್ಥೆಗಳು. ಜನ ಇಂಥ ಸಂಸ್ಥೆಗಳನ್ನು ಸೇರುವುದು ಸ್ವಪ್ರಸಿದ್ಧಿಗಾಗಿ, ಸ್ಥಾನ ಗೌರವಕ್ಕಾಗಿ. ಇವರಿಗೆಲ್ಲ ಕಣ್ಣಿರುವುದು ಸ್ವಂತ ಪ್ರತಿಷ್ಠೆಯ ಮೇಲೆಯೇ ಹೊರತು ಸೇವೆಯೆಂಬುದೊಂದು ಸೋಗು. ಪದಾಧಿಕಾರಿಗಳ ಆಯ್ಕೆಗಾಗಿ ಜರುಗುವ ಚುನಾವಣೆಗಳಲ್ಲಿ ನಡೆಯುವ ರಾಜಕೀಯವನ್ನು ನೋಡಿದರೆ 'ಸೇವೆ' ಯ ಬಣ್ಣ ಬಯಲಾಗುತ್ತದೆ. ಇಂಥ ಯಾವುದೇ ಒಂದು ಸಂಸ್ಥೆಯನ್ನು ಪ್ರಾರಂಭಿಸುವಾಗ ಅದಕ್ಕೆ ಮುಂದಾಗಿ ಬೀಜಾರೋಪಣ ಮಾಡಿ,

ಪೋಷಿಸಿ ಬೆಳೆಸುವವರು ಕೆಲವೇ ಒಳ್ಳೆಯ ಜನರಿರಬಹುದು, ಆದರೆ ಈ ಸಂಸ್ಥೆಗಳು ದೊಡ್ಡದಾಗಿ ಬೆಳೆದು ಹೆಸರು ಗಳಿಸಿದ ನಂತರ ಸ್ವಾರ್ಥಿಗಳು ನಾ ಮುಂದು ತಾ ಮುಂದು ಎಂದು ಒಳ ಸೇರುತ್ತಾರೆ. ರಾಮಕೃಷ್ಣ ಮಿಶನ್, ಭಾರತ ಸೇವಾಶ್ರಮ ಸಂಘ, ಮಾರವಾಡಿ ಮತ್ತು ಗುಜರಾತ್ ರಿಲೀಫ್ ಸೊಸೈಟಿಗಳು, ರೆಡ್‌ಕ್ರಾಸ್ ಮತ್ತು ಸೇಂಟ್‌ಜಾನ್ಸ್ ಅಂಬ್ಯುಲೆನ್ಸ್‌ನಂತಹ ಕೆಲವೇ ಒಳ್ಳೆಯ ಸಂಘಟನೆಗಳು ಉತ್ತಮ ಕಾರ್ಯವನ್ನೂ ಮಾಡುತ್ತಿವೆ. ಆದರೆ ಸೇವೆಯ ಹೆಸರಿನಲ್ಲಿ ಎಷ್ಟೆಷ್ಟೋ ಸಂಸ್ಥೆಗಳು ತಲೆಯೆತ್ತಿ ಒಳ್ಳೆಯ ಸೇವಾಸಂಸ್ಥೆಗಳ ಹೆಸರು ಕೆಡಿಸಿಬಿಡುತ್ತವೆ.

**ಸೂತ್ರ ಏಳು**

**ಪೊಳ್ಳು ಆಶ್ವಾಸನೆಗಳಿಂದ ದಾರಿ ತಪ್ಪಬೇಡಿ - ಅದರಲ್ಲೂ ಅವು ದೊಡ್ಡವರಿಂದ ಬಂದಾಗ :**

ನಮ್ಮ ದೇಶದ ಸಂದರ್ಭದಲ್ಲಿಯೇ ಬರುವ ಸಾಮಾನ್ಯ ಅನುಭವವಿದು. ಮನುಷ್ಯ ಹೇಗೋ ದೊಡ್ಡವನಾಗಿಬಿಟ್ಟನೆಂದರೆ ಅವನು ತನ್ನ ಹಳೆಯ ಸಹಕಾರಿಗಳನ್ನೂ, ಮಿತ್ರರನ್ನೂ ಮರೆತುಬಿಡುತ್ತಾನೆ. ತಾನೆ ಕೊಟ್ಟ ಭರವಸೆಗಳು ಅವನ ಸ್ಮೃತಿಪಟಲದಿಂದ ಮರೆಯಾಗಿಬಿಡುತ್ತವೆ. ಇದು ನಮ್ಮ ನಾಯಕರ ವಿಷಯದಲ್ಲಂತೂ ದಿಟ.

**ಸೂತ್ರ ಎಂಟು**

**ಸ್ವಪ್ರಯತ್ನವೇ ಶ್ರೇಷ್ಠ ಪ್ರಯತ್ನ :**

ಸ್ವಂತ ಪ್ರಯತ್ನವೇ ಯಾವಾಗಲೂ ಶ್ರೇಷ್ಠವೆಂಬುದು ಬಹುಶಃ ಸಕಲರಿಗೂ ಅನುಭವವೇದ್ಯ ಸಂಗತಿಯೇ. ಯಾರಿಂದಲೂ ನೈಜ ಸಹಾಯವನ್ನು ನಿರೀಕ್ಷಿಸುವುದು ನಿಷ್ಪ್ರಯೋಜಕ. ವ್ಯವಹಾರದಲ್ಲಂತೂ ಸ್ವಂತ ಲಾಭವಿಲ್ಲದೆ ಯಾರೂ ನಿಮ್ಮ ನೆರವಿಗೆ ಮುಂದಾಗುವುದಿಲ್ಲ. ಇಲ್ಲಿ ನಾವು ನೆನಪಿಡಬೇಕಾದ ಒಂದು ಮಹತ್ವದ ಅಂಶವೆಂದರೆ 'ದೊಡ್ಡ ಕುಳ'ಗಳೊಂದಿಗೆ ಎಂದೂ ಸ್ಪರ್ಧೆಗೆ ಇಳಿಯಬೇಡಿ. ಯಾವಾಗಲೂ ನಿಮ್ಮ ಯಶಸ್ಸಿಗೆ ಕಾರಣರು ನೀವೆ ಹೊರತು ಇನ್ನಾರೂ ಅಲ್ಲವೆಂಬುದನ್ನು ಗಮನದಲ್ಲಿಟ್ಟರೆ, ಈ ವ್ಯವಹಾರಿಕ ಜಗತ್ತಿನಲ್ಲಿ ನೀವು ಮುಂದುವರಿಯಬೇಕಿದ್ದರೆ ಸ್ವಾವಲಂಬನವೇ ಅತ್ಯುತ್ಕೃಷ್ಟ ದಾರಿಯೆಂಬುದನ್ನು ಮರೆಯಬೇಡಿ.

ಆಮೇಲಿನ ಎಂಟು ಸೂತ್ರಗಳಲ್ಲಿ ಆಧ್ಯಾತ್ಮಿಕವೆನಿಸಬಹುದಾದ ಸಲಹೆ ಯಾವುದೂ ಇಲ್ಲ. ಮನುಷ್ಯ ತನಗೆ ತಾನು ಒಳ್ಳೆಯವನಾಗಿ ನೆರೆಹೊರೆಯವರಿಗೆ ಉಪಯುಕ್ತವಾಗಿ ಬಾಳಲು ಅಗತ್ಯವಾದಂತಹ ಕೆಲ ಮಾತುಗಳಿವು. ಅನುಸರಿಸಿ ನೋಡಿ ನೀವೇ ಅನುಭವಿಸಿ. ಕಸ್ತೂರಿ ಕೃಪೆ



**ಶ್ರದ್ಧಾಂಜಲಿ**

ಶ್ರೇಷ್ಠವರ್ಗದ ಸಾಹಿತಿ ಪತ್ರಕರ್ತ, ನಾಟಕಕಾರರಾಗಿ ತಮ್ಮ 52 ವರ್ಷಗಳ ನಡುಬಾಳಿನುದ್ದಕ್ಕೂ ಸಾಹಿತ್ಯ ಸಂಸ್ಕೃತಿ ಸೇವೆ ಮಾಡಿದ ಶ್ರೀಯುತ ಬಿ. ಪುಟ್ಟಸ್ವಾಮಯ್ಯನವರು ತಾ॥ 25-1-84ರಂದು ನಿಧನರಾದುದೊಂದು ಸಾಹಿತ್ಯ ಲೋಕದ ದೊಡ್ಡ ನಷ್ಟ. ರಾಜ್ಯ ನಾಟಕ ಅಕಾಡೆಮಿಯು ಇವರಿಗೆ ೧೯೬೭ರಲ್ಲಿ ಫೆಲೋಶಿಪ್ ಕೊಟ್ಟು ತನ್ನ ಗೌರವ ಸಲ್ಲಿಸಿತ್ತು. ೧೯೬೭ರಲ್ಲೇ ಅವರ 'ಕ್ರಾಂತಿಕಲ್ಯಾಣ' ಗ್ರಂಥವು ಸಾಹಿತ್ಯ ಅಕಾಡೆಮಿಯ ಗೌರವ ಕೊಡಿಸಿಕೊಟ್ಟಿತ್ತು. ಕನ್ನಡ ನಾಡಿನ ಖ್ಯಾತ ಪ್ರಜಾವಾಣಿ ಪತ್ರಿಕೆಯ ಮೊದಲನೆ ಸಂಪಾದಕರು ಇವರೇ. ಗುಬ್ಬಿ ವೀರಣ್ಣನವರ ಪ್ರಖ್ಯಾತ ಕುರುಕ್ಷೇತ್ರ ನಾಟಕ ಇವರಿಂದಲೇ ರಚಿತವಾದದ್ದು. ಪ್ರಭುದೇವ, ಮಲ್ಲಮ್ಮನ ಪವಾಡ, ಹಿಟ್ಟಿನ ಹುಂಜ, ಬಸವಣ್ಣನವರನ್ನು ಕುರಿತ ಇತರ ಕಾದಂಬರಿಗಳು ಇವರನ್ನು ಶ್ರೇಷ್ಠ ವರ್ಗದ ಕಾದಂಬರಿಕಾರರ ಸ್ಥಾನಕ್ಕೇರಿಸಿದ್ದವು. ಬಹುಮುಖ ಪ್ರತಿಭಾ ಸಂಪನ್ನ ಪುಟ್ಟಸ್ವಾಮಯ್ಯನವರ ದಿವ್ಯಾತ್ಮಕ್ಕೆ ಸಿದ್ಧಗಂಗಾ ಮಾಸಪತ್ರಿಕೆ ತನ್ನ ಶ್ರದ್ಧಾಂಜಲಿ ಸಮರ್ಪಿಸುತ್ತಿದೆ.

# ಸಾಧನೆಯ ಸಂವತ್ಸರ ಭರವಸೆಗಳ ಈಡೇರಿಕೆಯ ದೃಢಸಂಕಲ್ಪ

ಒಂದು ವರ್ಷದ ಹಿಂದೆ ಜನತೆ ನೀಡಿದ ನಿರ್ಣಯದಂತೆ ಕರ್ನಾಟಕದಲ್ಲಿ 10ನೇ ಜನವರಿ 1983 ರಂದು ಜನತಾ ಸರ್ಕಾರ ಅಧಿಕಾರಕ್ಕೆ ಬಂದಿತು. ತನ್ನ ಆಡಳಿತದ ಪ್ರಥಮ ವಾರ್ಷಿಕ ದಿನದಂದು ಜನತೆಗೆ ಒಂದು ವರ್ಷದ ಕೆಳಗೆ ತಾನು ನೀಡಿದ್ದ ಭರವಸೆಗಳನ್ನು ಬಹುತೇಕ ಈಡೇರಿಸಿದ ಸಮಾಧಾನ ಸರ್ಕಾರಕ್ಕಿದೆ. ನೀಡಿದ್ದ ಆಶ್ವಾಸನೆ ಮತ್ತು ಸಾಧಿಸಿರುವ ಪ್ರಗತಿಯ ಚಿತ್ರ ಇಂದು ಜನತೆಯ ಮುಂದಿದೆ.

**ಸ್ವಚ್ಛ ಆಡಳಿತ :** ಅಧಿಕಾರದ ಎಲ್ಲ ರಂಗಗಳಲ್ಲೂ ಭ್ರಷ್ಟಾಚಾರ ನಿವಾರಣೆಗೆ ಲೋಕಾಯುಕ್ತರ ನೇಮಕ. ಮುಖ್ಯ ಮಂತ್ರಿಗಳೂ ಸೇರಿದಂತೆ ಸಾರ್ವಜನಿಕ ರಂಗದ ಎಲ್ಲ ಅಧಿಕಾರಿಗಳೂ ಇದರ ವ್ಯಾಪ್ತಿಗೆ ಒಳಪಡುವರು. ಸಾರ್ವಜನಿಕರ ಕುಂದು ಕೊರತೆಗಳ ಶೀಘ್ರ ನಿವಾರಣೆಗಾಗಿಯೇ ಒಂದು ಪ್ರತ್ಯೇಕ ಸಚಿವ ಶಾಖೆ. ಪಕ್ಷಾಂತರ ನಿಷೇಧಕ್ಕೆ ಮಸೂದೆ.

**ಆಡಳಿತ ವಿಕೇಂದ್ರೀಕರಣ :** ಜಿಲ್ಲಾ ಪರಿಷತ್ತುಗಳು ಮಂಡಳ ಪಂಚಾಯತಿಗಳು ಮತ್ತು ನ್ಯಾಯ ಪಂಚಾಯತಿಗಳ ರಚನೆಗಳಿಗೆ ಪಂಚಾಯತ್ ರಾಜ್ಯ ಮಸೂದೆ. ಅಧಿಕಾರ ವಿಕೇಂದ್ರೀಕರಣದ ದಿಸೆಯಲ್ಲಿ ಇದೊಂದು ದಿಟ್ಟ ಹೆಜ್ಜೆ.

* ಪ್ರಥಮಬಾರಿಗೆ ನಗರ ಸಭೆ ಮತ್ತು ಪುರಸಭೆಗಳಿಗೆ ಚುನಾವಣೆ ನಡೆಸಿದ ಹೆಮ್ಮೆ.
* ಹದಿನೆಂಟು ವರ್ಷ ತುಂಬಿದವರಿಗೆಲ್ಲ ನಗರ- ಪುರಸಭಾ ಚುನಾವಣೆಗಳಲ್ಲಿ ಮತಾಧಿಕಾರ ವಿಸ್ತರಣೆ.
* ನಗರಸಭೆ ಹಾಗೂ ಪುರಸಭೆಗಳಲ್ಲಿ ಮಹಿಳೆಯರಿಗೆ ಶೇ. 20 ಸ್ಥಾನಗಳು ಮೀಸಲು.
* **ಕನ್ನಡಕ್ಕೆ ಅಗ್ರಸ್ಥಾನ :** ಶಾಲೆಗಳಲ್ಲಿ ಕನ್ನಡ ಕಲಿಕೆ ಕಡ್ಡಾಯ.
* ಆಡಳಿತದ ಎಲ್ಲ ಹಂತಗಳಲ್ಲೂ ಕನ್ನಡದ ಬಳಕೆ; ಕಣ್ಣಿಟ್ಟು ನೋಡಲು ಕಾವಲು ಸಮಿತಿ.

**ಗ್ರಾಮೀಣ ಅಭಿವೃದ್ಧಿ :** ಎರಡು ವರ್ಷಗಳಲ್ಲಿ ಎಲ್ಲ ಹಳ್ಳಿಗಳಿಗೂ ಕುಡಿಯುವ ನೀರಿನ ಪೂರೈಕೆ. ಇದುವರೆಗೆ 1600 ಕ್ಕೂ ಹೆಚ್ಚು ಕೊಳವೆ ಬಾವಿಗಳ ನಿರ್ಮಾಣ.

* ಗ್ರಾಮೀಣ ಬಡಜನರಿಗೆ ವರ್ಷವಿಡೀ ಉದ್ಯೋಗ ನೀಡುವ ಸಲುವಾಗಿ ಗ್ರಾಮೀಣ ಉದ್ಯೋಗ ಯೋಜನೆ.
* ರೈತರಿಗೆ 36 ಕೋಟಿ ರೂ.ಯಷ್ಟು ವಿವಿಧ ರಿಯಾಯಿತಿಗಳು ಸಾಲಗಳ ಮನ್ನಾ, ನೀರಿನ ತೆರಿಗೆಯಲ್ಲಿ ವಿನಾಯಿತಿ. ವಿಫಲವಾದ ನೀರಾವರಿ ಬಾವಿಗಳಿಗೆ ಸಹಾಯ ಧನ.
* 80,000 ಹೆಕ್ಟೇರುಗಳಷ್ಟು ಹೆಚ್ಚುವರಿ ಭೂಮಿಗೆ ನೀರಾವರಿ ವಿಸ್ತರಣೆ.
* ಎಲ್ಲಾ ವಸತಿರಹಿತ ಕೃಷಿಕರಿಗೆ ಇನ್ನೆರಡು ವರ್ಷಗಳಲ್ಲಿ ಗೃಹ ನಿವೇಶನಗಳ ಹಂಚಿಕೆ–ಜನತಾ ಮನೆಗಳ ನಿರ್ಮಾಣಕ್ಕಾಗಿ ಈ ವರ್ಷ 12 ಕೋಟಿ ರೂ. ವೆಚ್ಚ.
* ಕಡು ಬಡವರ ಉದ್ಧಾರಕ್ಕಾಗಿ 45 ತಾಲ್ಲೂಕುಗಳಲ್ಲಿ ಅಂತ್ಯೋದಯ ಯೋಜನೆ ಆರಂಭ.

**ಕೈಗಾರಿಕೆ :** ಹೊಸ ಕೈಗಾರಿಕಾ ನೀತಿಯಂತೆ ಪ್ರತಿವರ್ಷ 1000 ಸಣ್ಣ ಮತ್ತು ಗೃಹ ಕೈಗಾರಿಕೆಗಳನ್ನು ಸ್ಥಾಪಿಸುವ ಸಂಕಲ್ಪ.

* ಕೈಮಗ್ಗ ಮತ್ತು ಕರಕುಶಲ ಉತ್ಪನ್ನಗಳಿಗೆ ವಿಶೇಷ ಉತ್ತೇಜನ, ಮುಂದಿನ 5 ವರ್ಷಗಳಲ್ಲಿ 20,000 ಖಾದಿ ಮತ್ತು ಗ್ರಾಮೋದ್ಯೋಗ ಘಟಕಗಳ ಸ್ಥಾಪನೆಯ ಗುರಿ.

**ಶಿಕ್ಷಣ :** ಶಿಕ್ಷಣ ವ್ಯವಸ್ಥೆಯ ಸುಧಾರಣೆಗೆ ಸಮಗ್ರ ಮಸೂದೆಯ ಮಂಡನೆ.

* "ಅಕ್ಷರ ಸೇನೆ" ಅನಕ್ಷರತೆಯ ನಿರ್ಮೂಲನಕ್ಕಾಗಿ ಕೈಗೊಂಡಿರುವ ಒಂದು ಬೃಹತ್ ಯೋಜನೆ.
* ಕರ್ನಾಟಕ ವಿದ್ಯಾರ್ಥಿಗಳಿಗೆ ಇಲ್ಲಿಯ ಮೆಡಿಕಲ್ ಮತ್ತು ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಕ್ಯಾಪಿಟೇಶನ್ ಶುಲ್ಕದಿಂದ ವಿನಾಯಿತಿ.
* ಮುಂದಿನ 5 ವರ್ಷಗಳಲ್ಲಿ ಕ್ಯಾಪಿಟೇಶನ್ ಶುಲ್ಕವನ್ನು ಹಂತ ಹಂತವಾಗಿ ತೊಡೆದು ಹಾಕಲು ಸುಗ್ರೀವಾಜ್ಞೆಯ ಜಾರಿ

**ಸಮಾಜ ಕಲ್ಯಾಣ :** ಪ್ರತಿಭಾವಂತ ಹರಿಜನ, ಪದವೀಧರರಿಗೆ ಸರ್ಕಾರದ ಗೆಜೆಟೆಡ್ ಹುದ್ದೆಗಳಿಗೆ ನೇರ ನೇಮಕಾವಕಾಶ.

* ದೇವದಾಸಿ ಪದ್ಧತಿಯ ನಿರ್ಮೂಲನೆ.
* ಆರ್ಥಿಕವಾಗಿ ಹಿಂದುಳಿದ ವರ್ಗದವರಿಗೆ ನೀಡಲಾಗುತ್ತಿರುವ ವಿದ್ಯಾರ್ಥಿವೇತನ ಮೊತ್ತದ ಹೆಚ್ಚಳ.
* ಹಿಂದುಳಿದ ವರ್ಗಗಳ ಏಳಿಗೆಗಾಗಿ ದ್ವಿತೀಯ ಹಿಂದುಳಿದ ವರ್ಗಗಳ ಆಯೋಗ ಹಾಗೂ ಅಲ್ಪ ಸಂಖ್ಯಾತರ ಹಿತರಕ್ಷಣೆಗೆ ಪ್ರಥಮ ಬಾರಿಗೆ ಅಲ್ಪ ಸಂಖ್ಯಾತರ ಆಯೋಗಗಳ ರಚನೆ.

**ಉದ್ಯೋಗ :** 24,000 ದಿನಗೂಲಿ ಕಾರ್ಮಿಕರಿಗೆ ಖಾಯಂ ಉದ್ಯೋಗದ ಭರವಸೆ.

* ಕಡಿಮೆ ಆದಾಯದ ಪತ್ರಿಕೋದ್ಯೋಗಿಗಳಿಗೆ ನಿವೃತ್ತಿ ವೇತನ ಮತ್ತು ವೈದ್ಯಕೀಯ ಸೌಲಭ್ಯಗಳ ನೀಡಿಕೆ.
* ಜನ ಸಮುದಾಯ ಸಮಗ್ರ ಪ್ರಗತಿಗೆ ನೆರವಾಗುವ ಇಂತಹ ನೂರಾರು ಪ್ರಗತಿಪರ ಕಾರ್ಯಕ್ರಮಗಳ ಮುನ್ನಡೆ.

ಈ ಸಾಧನೆಯ ಹಾದಿಯಲ್ಲಿ ಎದುರಿಸಿದ ಅಡ್ಡಿ ಆತಂಕಗಳು ಅಸಂಖ್ಯಾತ. ಆದರೂ ಜನತೆಯ ಆಶೋತ್ತರಗಳ ಕನಸನ್ನು ನನಸಾಗಿಸಲು ಅದರಲ್ಲಿಯೂ ಕಡು ಬಡವರ ಏಳಿಗೆಯನ್ನು ಸಾಧಿಸಲು ಸರ್ಕಾರ ದೃಢ ಸಂಕಲ್ಪ ಹಾಗೂ ಸಮರ್ಪಣಾಭಾವದಿಂದ ಅವಿರತ ಶ್ರಮಿಸುತ್ತಿದೆ. ಮುಂದೆಯೂ ಶ್ರಮಿಸುತ್ತದೆ.

ಜನತೆಯ ಆಶೋತ್ತರಗಳಿಗೆ ಸದಾ ಮಿಡಿಯುವ ಸರ್ಕಾರ–'**ಜನತಾ ಸರ್ಕಾರ**'

LICENCED TO POST WITHOUT PRE PAYMENT LICENCE NO. 3
SIDDAGANGA Monthly Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.